# ಅಮ್ಮಿನಭಾವಿ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಸಂಪ್ರಬಂಧ)

ಸಂಶೋಧಕರು
ಮಂಗಲಾ ಎಂ. ಗೌಡ

ಮಾರ್ಗದರ್ಶಕರು
ಡಾ. ವಾಸುದೇವ ಬಡಿಗೇರ
ಪ್ರವಾಚಕರು



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬



ಅಕ್ಟೋಬರ ೨೦೦೯

# ಅಮ್ಮಿನಭಾವಿ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಸಂಪ್ರಬಂಧ)

ಸಂಶೋಧಕರು
**ಮಂಗಲಾ ಎಂ. ಗೌಡ**

ಮಾರ್ಗದರ್ಶಕರು
**ಡಾ. ವಾಸುದೇವ ಬಡಿಗೇರ**
ಪ್ರವಾಚಕರು






**ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ**
**ಸಮಾಜ ವಿಜ್ಞಾನಗಳ ನಿಕಾಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ – ೫೮೩೨೭೬**

**2009**

## ಸಂಶೋಧಕರ ಪ್ರಮಾಣಪತ್ರ

**"ಅಮ್ಮಿನಭಾವಿ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎಂಬ ಸಂಪ್ರಬಂಧವನ್ನು **ಡಾ. ವಾಸುದೇವ ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: ೧೫-೧೦-೨೦೦೯
ಸ್ಥಳ: ವಿದ್ಯಾರಣ್ಯ

**(ಮಂಗಲಾ ಎಂ. ಗೌಡ)**
ಸಂಶೋಧಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ – ೫೮೩ ೨೭೬

# ಮಾರ್ಗದರ್ಶಕರ ಪ್ರಮಾಣಪತ್ರ

**"ಅಮ್ಮಿನಭಾವಿ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎಂಬ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ **ಮಂಗಲಾ ಎಂ. ಗೌಡ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:೧೫-೧೦-೨೦೦೯
ಸ್ಥಳ: ವಿದ್ಯಾರಣ್ಯ

**(ಡಾ. ವಾಸುದೇವ ಬಡಿಗೇರ)**
ಪ್ರವಾಚಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ – ೫೮೩ ೨೭೬

# ಪರಿವಿಡಿ

# ಅಧ್ಯಾಯ – ಒಂದು

## ಪ್ರಸ್ತಾವನೆ

ಭಾರತದ ಸಂಸ್ಕೃತಿಯು ಬಹಳ ವೈಶಿಷ್ಟ್ಯಪೂರ್ಣವಾದದ್ದು. ಉನ್ನತವಾದ ಪರಂಪರೆ ಹಾಗೂ ಸುದೀರ್ಘವಾದ ಚರಿತ್ರೆಯನ್ನು ಹೊಂದಿರುವ ಭಾರತ ದೇಶದ ಪ್ರತಿಯೊಂದು ಭಾಗಗಳಿಗೂ ತಮ್ಮದೇ ಆದ ವಿಶಿಷ್ಟ ಗುಣಲಕ್ಷಣ, ಉಜ್ವಲ ಚರಿತ್ರೆ ಇದ್ದು, ಅವುಗಳು ಸಮಗ್ರವಾಗಿ ಅಭ್ಯಸಿಸಲ್ಪಟ್ಟಾಗ ಮಾತ್ರ ಭಾರತದ ಸಾಂಸ್ಕೃತಿಕ ಸಂಪತ್ತಿನ ಹಿರಿಮೆ ಅರ್ಥವಾಗುತ್ತದೆ. ಕರ್ನಾಟಕವು ಪೌರಾಣಿಕ ಮತ್ತು ಐತಿಹಾಸಿಕ ಮಹತ್ವವನ್ನು ಪಡೆದ ಪ್ರಾಚೀನ ನಾಡಾಗಿದೆ. ಕರ್ನಾಟಕದಲ್ಲಿರುವ ಅನೇಕ ಪ್ರದೇಶಗಳು ಹಲವಾರು ರಾಜಮನೆತನಗಳ ಆಳ್ವಿಕೆಗೊಳಪಟ್ಟು ಇತಿಹಾಸವನ್ನು ಪುನರ್ ರಚಿಸಲು ಅದಕ್ಕೆ ಪೂರಕವಾದ ಆಕರ ಸಾಮಗ್ರಿಗಳು ಅತ್ಯಾವಶ್ಯಕವೆನಿಸಿದೆ. ಈ ಆಕರ ಸಾಮಗ್ರಿಗಳನ್ನು ನಾನಾ ಪ್ರಕಾರದಲ್ಲಿ ಸಂಗ್ರಹಿಸಿ, ಅವುಗಳನ್ನು ಕೂಲಂಕುಷವಾಗಿ ಅಧ್ಯಯನ ಮಾಡಿ ಚರಿತ್ರೆಯ ವಿವಿಧ ಮುಖಗಳನ್ನು ಪುನರ್ ರಚಿಸುವುದು ಸಾಮಾನ್ಯ ಸಂಶೋಧನಾ ಪ್ರಕ್ರಿಯೆ. ಈ ಹಿನ್ನೆಲೆಯಲ್ಲಿ ರಾಷ್ಟ್ರಮಟ್ಟದ ಮತ್ತು ಪ್ರಾದೇಶಿಕ ಮಟ್ಟದ ಸಂಶೋಧನೆಗಳು ನಡೆದು ಅವುಗಳ ಸಹಾಯದಿಂದ ಅನೇಕ ಹೊಸ–ಹೊಸ ಮಾಹಿತಿಗಳು ಚರಿತ್ರೆಯಲ್ಲಿ ಸೇರಿಕೊಳ್ಳುತ್ತವೆ. ಇದರಿಂದ ಆ ಪ್ರದೇಶಗಳು ಕೇವಲ ಇತಿಹಾಸ ಪೂರ್ವಕಾಲದ ಸಂಸ್ಕೃತಿಯನ್ನು ತಿಳಿಯಲು ಸಾಧ್ಯವಾಗಿದ್ದರೆ, ಮತ್ತೆ ಕೆಲವು ಸಂಶೋಧನಗಳು ವಾಸ್ತು ಮತ್ತು ಮೂರ್ತಿಶಿಲ್ಪಕ್ಕೆ ಸೀಮಿತವಾಗಿವೆ. ಇನ್ನೂ ಕೆಲವು ಸಂಶೋಧನೆಗಳಲ್ಲಿ ಶಾಸನ ಹಾಗೂ ಸಾಹಿತ್ಯಗಳನ್ನು ಮುಂದಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಈ ಹಿನ್ನೆಲೆಯನ್ನು ಅವಲೋಕಿಸಿದಾಗ ಸಂಶೋಧನೆಯು ಕುತೂಹಲದಲ್ಲಿ ಹುಟ್ಟಿ ಸತ್ಯದಲ್ಲಿ ಸಮಾವೇಶಗೊಳ್ಳುತ್ತದೆ. ಇಂತಹ

ಸಂಶೋಧನೆಯು ಕರ್ನಾಟಕದಲ್ಲಿಯ ಶಾಸನ, ಹಸ್ತಪ್ರತಿ, ಭಾಷೆ, ಜಾನಪದಗಳ ಶೋಧ, ಸಂಗ್ರಹ, ವಿಶ್ಲೇಷಣೆ ಮತ್ತು ಪ್ರಕಟಣೆಗಳ ರೂಪದಲ್ಲಿ ಪ್ರವಹಿಸಿದೆ. ಅವುಗಳಿಂದ ಕರ್ನಾಟಕದ ಇತಿಹಾಸ, ಸಾಹಿತ್ಯ ಮತ್ತು ಸಂಸ್ಕೃತಿಗಳ ಸಮಗ್ರ ದರ್ಶನವನ್ನು ಮಾಡುವ ಪ್ರಯತ್ನ ನಡೆದಿದೆ.

ಕರ್ನಾಟಕದ ವಾಯುವ್ಯ ಭಾಗದಲ್ಲಿರುವ ಧಾರವಾಡ ಜಿಲ್ಲೆಯು ಐದು ತಾಲೂಕುಗಳನ್ನು ಒಳಗೊಂಡಿದೆ. ಅದರಲ್ಲಿ ಧಾರವಾಡ ತಾಲೂಕು ಕೂಡಾ ಒಂದು. ಧಾರವಾಡ ಜಿಲ್ಲೆಯು ಫಲವತ್ತಾದ ಕಪ್ಪು ಮಣ್ಣಿನ ಮಲೆನಾಡು, ಅರೆ ಮಲೆನಾಡು ಮತ್ತು ಬಯಲು ಪ್ರದೇಶಗಳನ್ನು ಒಳಗೊಂಡಿರುವ ಇಲ್ಲಿ ಅನೇಕ ಬೆಳೆಗಳನ್ನು ಬೆಳೆಯುತ್ತಾರೆ. ಜಿಲ್ಲೆಯ ಉತ್ತರದಲ್ಲಿ ಬೆಳಗಾವಿ ಜಿಲ್ಲೆ ಇದ್ದು, ಮಲಪ್ರಭಾ ನದಿ ಗಡಿಯಾಗಿ ಹರಿಯುತ್ತದೆ. ದಕ್ಷಿಣದಲ್ಲಿ ನೂತನ ಹಾವೇರಿ, ಪೂರ್ವದಲ್ಲಿ ಗದಗ, ಪಶ್ಚಿಮದಲ್ಲಿ ಉತ್ತರ ಕನ್ನಡ ಜಿಲ್ಲೆಗಳಿವೆ. ಧಾರವಾಡ ಜಿಲ್ಲೆಯು ಇತಿಹಾಸ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತನ್ನದೇ ಆದ ಮಹತ್ವವನ್ನು ಹೊಂದಿದೆ. ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಅಮ್ಮಿನಭಾವಿ ಪರಸರವು ಧಾರವಾಡ ತಾಲೂಕಿನಲ್ಲಿ ಬರುತ್ತದೆ. ಧಾರವಾಡದಿಂದ ಉತ್ತರಕ್ಕೆ ಸುಮಾರು ಎಂಟು ಕಿ.ಮೀ ದೂರದಲ್ಲಿದೆ. ಸವದತ್ತಿ ರಸ್ತೆಯಲ್ಲಿರುವ ಈ ಸ್ಥಳವು ಅನೇಕ ಐತಿಹಾಸಿಕ ಅವಶೇಷಗಳಿಂದಾಗಿ ಪ್ರಸಿದ್ಧಿ ಪಡೆದಿದೆ.

ಪ್ರಾಚೀನ ಶಾಸನಗಳಲ್ಲಿ ಅಮ್ಮಯ್ಯನಭಾವಿ ಎಂದೇ ಉಲ್ಲೇಖಗೊಂಡಿರುವ ಈ ಊರಿನಿಂದ ಈವರೆಗೆ ಒಂಬತ್ತು ಶಿಲಾಶಾಸನಗಳು ಪ್ರಕಟಗೊಂಡಿವೆ. ಧಾರವಾಡ ತಾಲೂಕಿನ ಜೈನ ಕೇಂದ್ರಗಳಲ್ಲಿ ಅಮ್ಮಿನಭಾವಿ ಪ್ರಮುಖವೆನಿಸಿದೆ. ಈ ಪ್ರದೇಶವು ಕುಂದೂರು ಐನೂರು (500) ಎಂಬ ಆಡಳಿತ ಘಟಕದಲ್ಲಿದೆ. ಇಲ್ಲಿ ಅನೇಕ ರಾಜಮನೆತನಗಳು, ಅಧಿಕಾರಿ ವರ್ಗಗಳು, ಸಾಮಂತರು ಆಡಳಿತ ನಡೆಸಿದ್ದಾರೆ. ಈ ಪ್ರದೇಶದ ಸಾಂಸ್ಕೃತಿಕ ಮಹತ್ವವನ್ನು ತಿಳಿಯಬೇಕಾದರೆ ಅಲ್ಲಿಯ ಪುರಾತತ್ವ ಅವಶೇಷಗಳನ್ನು ಮತ್ತು ಮೌಖಿಕ ಆಕರಗಳನ್ನು, ಭೌಗೋಳಿಕ ಹಿನ್ನಲೆಯನ್ನು ಅಧ್ಯಯನ ಮಾಡುವುದು ಅವಶ್ಯಕ. ಇಂತಹ ಅವಶೇಷಗಳಲ್ಲಿ ಶಾಸನಗಳು, ದೇವಾಲಯಗಳು, ಬಸದಿಗಳು, ಮಠಗಳು, ಮಸಿದಿಗಳು, ವಿದ್ಯಾಕೇಂದ್ರಗಳು, ಸಂಘ ಸಂಸ್ಥೆಗಳು, ಕೆರೆ–ಬಾವಿಗಳನ್ನು ಒಳಗೊಂಡಿದೆ. ಇಂತಹ ಮಹತ್ವದ

ಇತಿಹಾಸವನ್ನೊಳಗೊಂಡ ಅಮ್ಮಿನಭಾವಿ ಪ್ರದೇಶ ಅಂದು ಅತ್ಯಂತ ಶ್ರೀಮಂತಿಕೆಯ ಪ್ರದೇಶವಾಗಿತ್ತು. ಅನೇಕ ಸಾಂಸ್ಕೃತಿಕ ಅವಶೇಷಗಳನ್ನು ಇಂದಿಗೂ ಕಾಣಬಹುದು.

**ಅಧ್ಯಯನದ ಉದ್ದೇಶ:**

ಪ್ರಸ್ತುತ ಅಧ್ಯಯನದ ಶೀರ್ಷಿಕೆ "ಅಮ್ಮಿನಭಾವಿ ಪರಿಸರದ ಸಾಂಸ್ಕೃತಿಕ ಅಧ್ಯಯನ"ವಾಗಿದ್ದು, ಅಜ್ಞಾತವಾಗಿರುವ ಅಮ್ಮಿನಭಾವಿ ಪರಿಸರದ ಸಾಂಸ್ಕೃತಿಕ ಇತಿಹಾಸವನ್ನು ಈ ಅಧ್ಯಯನದ ಮೂಲಕ ಬೆಳಕಿಗೆ ತರುವುದು ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಇಲ್ಲಿನ ಪುರಾತತ್ವ ಅವಶೇಷಗಳ ಬಗ್ಗೆ ಒಂದೆರಡು ಸಣ್ಣ ವಿವರಗಳು ಪ್ರಕಟವಾಗಿರುವದನ್ನು ಹೊರತು ಪಡಿಸಿದರೆ, ಸಮಗ್ರ ಹಾಗೂ ಸೂಕ್ಷ್ಮ ನೆಲೆಯಲ್ಲಿ ಅಧ್ಯಯಗಳು ನಡೆದಿರುವುದು ಅತ್ಯಂತ ಕಡಿಮೆ ಎಂದೇ ಹೇಳಬಹುದು. ಈ ಪ್ರದೇಶವನ್ನು ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ಅಧ್ಯಯನಗಳಿಗೆ ಒಳಪಡಿಸುವದಾಗಿದೆ. ಇದರ ಜೊತೆಗೆ ಕ್ಷೇತ್ರಕಾರ್ಯದ ಮೂಲಕ ಪ್ರಾಚೀನ ಅವಶೇಷಗಳನ್ನು ಗುರುತಿಸಿ ಅವುಗಳನ್ನು ದಾಖಲಿಕರಿಸುವದು, ಮತ್ತು ಚಾರಿತ್ರಿಕ ಸಂದರ್ಭದಲ್ಲಿ ನಿರ್ಮಾಣವಾದ ಎಲ್ಲಾ ಬಗೆಯ ಸ್ಮಾರಕಗಳ ಕುರಿತು ಅಧ್ಯಯನ ಮಾಡುವ ಮುಖ್ಯ ಉದ್ದೇಶವನ್ನಿಟ್ಟುಕೊಳ್ಳಲಾಗಿದೆ. ಈ ಪ್ರದೇಶದ ಗೊತ್ತಿರುವ ಮಾಹಿತಿಗಳನ್ನು ಪುನರ್ ಪರಿಶೀಲಿಸಿ, ಹೊಸ ಮಾಹಿತಿಗಳನ್ನು ಸೇರ್ಪಡಿಸುವದಗಿದೆ. ಒಟ್ಟಾರೆ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಅಮ್ಮಿನಭಾವಿ ಪ್ರದೇಶ ವಹಿಸಿದ ಪಾತ್ರ ಮತ್ತು ಕರ್ನಾಟಕ ಚರಿತ್ರೆಗೆ ನೀಡಿದ ಕೊಡುಗೆಗಳನ್ನು ತಿಳಿಸುವುದು ಸಹ ಈ ಸಂಶೋಧನೆಯ ಉದ್ದೇಶವಾಗಿದೆ.

**ಅಧ್ಯಯನದ ವ್ಯಾಪ್ತಿ:**

ಯಾವುದೇ ಒಂದು ಸಂಶೋಧನೆಗೆ ಅಧ್ಯಯನದ ವ್ಯಾಪ್ತಿ ಬಹುಮುಖ್ಯ. ಒಂದು ನಿರ್ಧಿಷ್ಟ ಹಾಗೂ ಉದ್ದೇಶಪೂರಿತ ಸಂಶೋಧನೆ ಯಶಸ್ವಿಯಾಗಲು ಇದು ತುಂಬಾ ಸಹಕಾರಿಯಾಗಿದೆ. ಪ್ರಸ್ತುತ ಅಧ್ಯಯನ 'ಅಮ್ಮಿನಭಾವಿ ಪರಿಸರದ ಸಾಂಸ್ಕೃತಿಕ ಅಧ್ಯಯನ' ವಿಷಯದ ವ್ಯಾಪ್ತಿಯನ್ನು ಭೌಗೋಳಿಕ ಮತ್ತು ಕಾಲಾವಧಿಯ ದೃಷ್ಟಿಯಿಂದ ನಿರ್ಧಿಷ್ಟಪಡಿಸಲಾಗಿದೆ. ಪ್ರಾಚೀನ ಆಡಳಿತ ವಿಭಾಗಗಳಾದ ಬೆಳ್ವೊಲ ಮುನ್ನೂರು (300) ಮತ್ತು ಹಲಸಿಗೆ ನಾಡಿನ ಕುಂದೂರು ಐನೂರು (500)ಕ್ಕೆ ಅಮ್ಮಿನಭಾವಿ ಪರಿಸರ ಒಳಗೊಂಡಿದ್ದು, ಇದು ಪ್ರಸ್ತುತ ಅಧ್ಯಯನದ ಪ್ರಾದೇಶಿಕ ವ್ಯಾಪ್ತಿಯಾಗಿದೆ. ಈ ಪರಿಸರವು ಪ್ರಾಗಿತಿಹಾಸಕಾಲದಿಂದಲೂ ಸಾಂಸ್ಕೃತಿಕ ಕ್ಷೇತ್ರವಾಗಿದ್ದು, ಆರಂಭದಿಂದ ವಿಜಯನಗರೋತ್ತರ ಕಾಲಾವಧಿಯನ್ನು ಅಧ್ಯಯನಕ್ಕೆ ಸೀಮಿತಗೊಳಿಸಲಾಗಿದೆ.

**ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ:**

ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಅಮ್ಮಿನಭಾವಿ ಪರಿಸರಕ್ಕೆ ಸಂಬಂಧಿಸಿದಂತೆ ಅಲ್ಲಿನ ಇತಿಹಾಸ ಮತ್ತು ಪುರಾತತ್ವ, ದೇವಾಲಯ, ಮೂರ್ತಿಶಿಲ್ಪ, ವೀರಗಲ್ಲು ಹಾಗೂ ಶಾಸನಗಳನ್ನು ಕುರಿತಂತೆ ಕೆಲವು ಕಿರು ಪ್ರಬಂಧಗಳು ಮತ್ತು ಬಿಡಿ ಲೇಖನಗಳು ಪ್ರಕಟಗೊಂಡಿರುವದನ್ನು ಗಮನಿಸಬಹುದು.

**ಗ್ಯಾಜೆಟಿಯರ್/ಗ್ರಂಥಗಳು/ವಿಶ್ವಕೋಶಗಳು:**

ಸೂರ್ಯನಾಥ ಕಾಮತ್ ಸಂಪಾದಿಸಿರುವ 'ಧಾರವಾಡ ಜಿಲ್ಲೆಯ ಗ್ಯಾಜೆಟಿಯರ್' (1995) ಎಂಬ ಗ್ರಂಥದಲ್ಲಿ ಪ್ರೇಕ್ಷಣಿಯ ಸ್ಥಳಗಳು ಎಂಬ ಶಿರ್ಷಿಕೆ ಅಡಿಯಲ್ಲಿ ಧಾರವಾಡ ತಾಲೂಕಿನ ಅಮ್ಮಿನಭಾವಿ ಪ್ರದೇಶದ ಕುರಿತು ಅಧ್ಯಯನ ಕೈಗೊಂಡಿದ್ದಾರೆ.

ಧಾರವಾಡ ಜಿಲ್ಲಾ ಗ್ಯಾಜೆಟಿಯರ್, ಕಟ್ಟಿ ವೆಂಕಟರಂಗೂ 1984ರಲ್ಲಿ ಸಂಪಾದಿಸಿರುವ ಪ್ರಥಮ ಆವೃತ್ತಿಯು ಏಶಿಯನ್ ಏಜ್ಯುಕೇಶನ್ ಸರ್ವಿಸಿಸ್, ನವದೆಹಲಿಯಲ್ಲಿ ಪ್ರಕಟಗೊಂಡಿದ್ದು, ಪ್ರಸ್ತುತ ಅಧ್ಯಯನ ಪ್ರದೇಶದ ಬಗ್ಗೆ ಉಲ್ಲೇಖವಿದೆ. ಸೂರ್ಯನಾಥ ಕಾಮತ್ ಅವರು 1984ರಲ್ಲಿ ಸಂಪಾದಿಸಿರುವ ಕರ್ನಾಟಕ ರಾಜ್ಯ ಗ್ಯಾಜೆಟಿಯರ್ (ಮೂರು ಸಂಪುಟಗಳು) ಕರ್ನಾಟಕ ಸರ್ಕಾರ, ಬೆಂಗಳೂರಿನಲ್ಲಿ ಪ್ರಕಟಗೊಂಡಿದ್ದು, ಅಧ್ಯಯನದ ಪ್ರದೇಶದ ಕುರಿತು ಉಲ್ಲೇಖ ಇದೆ. ಧಾರವಾಡ, ಬೆಳಗಾವಿ, ಗದಗ, ಕಾನಡಾ, ಕನ್ನಡ ವಿಷಯ ವಿಶ್ವಕೋಶ 2007 ಪರಿಷ್ಕೃತ ಸಂಪುಟ-2, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ ಇವರು ಪ್ರಕಟಿಸಿರುವ ಗ್ರಂಥದಲ್ಲಿ ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡ ಪ್ರದೇಶದ ಬಗ್ಗೆ ಸಂಕ್ಷಿಪ್ತ ವಿವರಣೆ ನೀಡಿದ್ದಾರೆ. ಎಂ.ಎಂ. ಕಲಬುರ್ಗಿ ಅವರ 'ಧಾರವಾಡ ಜಿಲ್ಲೆಯ ಶಾಸನಸೂಚಿ' ಮತ್ತು 'ಧಾರವಾಡ ತಾಲೂಕಿನ ಶಾಸನಗಳು' ಎನ್ನುವ ಗ್ರಂಥದಲ್ಲಿ ಅಮ್ಮಿನಭಾವಿ ಪ್ರದೇಶದಲ್ಲಿ ದೊರೆತ ಶಾಸನಗಳನ್ನು ಪ್ರಕಟಿಸಿದ್ದಾರೆ.

**ಕೃತಿಗಳು:**

ಸಿ. ಮಹದೇವ ಅವರ *'ಕರ್ನಾಟಕ ದೇವಾಲಯ ಕೋಶ ಧಾರವಾಡ ಜಿಲ್ಲೆ'* ಎನ್ನುವ ಕೃತಿಯಲ್ಲಿ ಅಮ್ಮಿನಭಾವಿ ಪರಿಸರದಲ್ಲಿದ್ದ ದೇವಾಲಯಗಳ ಕುರಿತು ವಾಸ್ತುಶಿಲ್ಪ ವಿವರಣೆಯನ್ನು ನೀಡಲಾಗಿದೆ.

ಅಪ್ಪಣ್ಣ ಹಂಜೆಯವರು *'ಧಾರವಾಡ ಪರಿಸರದಲ್ಲಿ ಜೈನಧರ್ಮ'* ಎನ್ನುವ ಕೃತಿಯಲ್ಲಿ ಅಮ್ಮಿನಭಾವಿಯ ನೇಮಿನಾಥ ಜಿನಾಲಯದ ಬಗ್ಗೆ ಅಧ್ಯಯನ ಕೈಗೊಂಡಿದ್ದಾರೆ.

ರು.ಮ. ಷಡಕ್ಷರಯ್ಯ ಮತ್ತು ಬಿ. ಜಯಮ್ಮ ಅವರ *'ಧಾರವಾಡ ಜಿಲ್ಲೆಯ ಐತಿಹಾಸಿಕ ಸ್ಮಾರಕಗಳು ಮತ್ತು ಶಿಲ್ಪಗಳು'* ಎನ್ನುವ ಕೃತಿಯಲ್ಲಿ ಅಮ್ಮಿನಭಾವಿ ಪರಿಸರದ ಜೈನಶಿಲ್ಪಗಳ ಕುರಿತು ಅಧ್ಯಯನ ಮಾಡಿದ್ದಾರೆ.

ಚಂದ್ರಶೇಖರ ನಾರಾಯಣಪುರ ಅವರ **'ಕರ್ನಾಟಕದ ವೀರಶೈವ ಮಠಗಳು'** ಎಂಬ ಕೃತಿಯಲ್ಲಿ ಧಾರವಾಡ ಜಿಲ್ಲೆಯ ಇಪ್ಪತ್ತೊಂದು ವೀರಶೈವ ಮಠಗಳ ಮಾಹಿತಿಯನ್ನು ನೀಡಲಾಗಿದೆ.

**ಲೇಖನಗಳು:**

ಚೆನ್ನಕ್ಕ ಪಾವಟೆಯವರ 'ಶಾಸನ ಸಂಜೀವಿನಿ' ಎನ್ನುವ ಕೃತಿಯಲ್ಲಿ 'ಶಾಸನಗಳಲ್ಲಿ ಉಲ್ಲೇಖಿತವಾದ ಅಮ್ಮಿನಭಾವಿ' ಶೀರ್ಷಿಕೆಯಡಿಯಲ್ಲಿ ಲೇಖನ ಬರೆದಿದ್ದಾರೆ. ಇದೇ ಕೃತಿಯಲ್ಲಿ 'ಶಾಸನಗಳಲ್ಲಿ ಮಂಡಿತವಾದ ನರೇಂದ್ರ' ಮತ್ತು 'ಧಾರವಾಡ ಜಿಲ್ಲೆಯ ಚಾರಿತ್ರಿಕ ಹಿನ್ನಲೆ' ಎನ್ನುವ ಶೀರ್ಷಿಕೆ ಅಡಿಯಲ್ಲಿ ಲೇಖನ ಬರೆದಿದ್ದಾರೆ. ಆರ್. ಗೋಪಾಲರಾವ್ ಅವರ ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಎನ್ನುವ ಸಂಪಾದಕ ಕೃತಿಯಲ್ಲಿ ಆರ್.ಎಚ್. ಕುಲಕರ್ಣಿಯವರು 'ಅಮ್ಮಿನಭಾವಿ ಶಾಂತೇಶ್ವರ ಮಠದಲ್ಲಿರುವ ಭಿತ್ತಿ ಚಿತ್ರಗಳು' ಮತ್ತು ಎಸ್.ವಿ. ಪಾಡಿಗಾರ ಅವರು ಕನ್ನಡ ಸಂಶೋಧನಾ ಸಂಸ್ಥೆಯು ಪ್ರಕಟಿಸುವ 'ಎ ಗ್ರೇಟ್ ಟು ದ ಕನ್ನಡ ರಿಸರ್ಚ್ ಇನ್ಸ್ಟಿಟ್ಯೂಟ್ ಮ್ಯೂಸಿಯಂ' ಎಂಬ ಹೊತ್ತಿಗೆಯಲ್ಲಿ ಕನ್ನಡ ಸಂಶೋಧನಾ ಸಂಸ್ಥೆಯಲ್ಲಿರುವ ಅಮ್ಮಿನಭಾವಿಯ ಪಾರ್ಶ್ವನಾಥ ಶಿಲ್ಪವನ್ನು ಪ್ರಕಟಿಸಿದ್ದಾರೆ.

**ಪ್ರಬಂಧಗಳು:**

ಆರ್. ಆರ್. ಜೋಷಿ ಅವರ *'ಎ ಕಲ್ಚರಲ್ ಹಿಸ್ಟರಿ ಆಫ್ ಧಾರವಾಡ ರಿಜನ್'* ಎಂಬ ಮಹಾಪ್ರಬಂಧದಲ್ಲಿ ಧಾರವಾಡ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸದ ಬಗ್ಗೆ ತಿಳಿಸಿದ್ದಾರೆ. ಅಜಿತ್ ಪ್ರಸಾದ ಅವರ ಮಹಾಪ್ರಬಂಧ *'ಜೈನಿಸಂ ಇನ್ ಧಾರವಾಡ ರಿಜನ್'* ದಲ್ಲಿ ಜಿಲ್ಲೆಯ ಸುಮಾರು ಹತ್ತೊಂಬತ್ತು ಜೈನಕೇಂದ್ರಗಳ ಬಗ್ಗೆ ಉಲ್ಲೇಖ ಇದೆ. ಬಿ. ಜಯಮ್ಮ ಅವರ ಮಹಾಪ್ರಬಂಧ 'ಧಾರವಾಡ ಜಿಲ್ಲೆಯ ಪುರಾತತ್ವ'ದಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶಕ್ಕೆ ಸಂಬಂಧಿಸಿದಂತೆ ಅನೇಕ ಪ್ರಾಚ್ಯವಶೇಷಗಳನ್ನು ಕುರಿತು ಅಧ್ಯಯನ ಕೈಗೊಂಡಿದ್ದಾರೆ. ಜಿಲ್ಲೆಯ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಸ್ಥಿತಿಗತಿಗಳ ಬಗ್ಗೆ ಬಿಡಿ ವಿವರಗಳು ಲಭಿಸಿವೆ.

ಜಯಶೀಲಾ ಎಂ.ಕೆ. ಅವರ ಎಂ.ಫಿಲ್ ಪ್ರಬಂಧವಾದ *'ಆರೋಗ್ಯಕೇಂದ್ರ ಮತ್ತು ಜನಸಂಖ್ಯೆ ನಿಯಂತ್ರಣ ಧಾರವಾಡ ಜಿಲ್ಲೆಯ ಅಮ್ಮಿನಭಾವಿ ಪ್ರಾಥಮಿಕ ಆರೋಗ್ಯಕೇಂದ್ರ-ಒಂದು ಅಧ್ಯಯನ'* ದಲ್ಲಿ ಈ ಪ್ರದೇಶದ ಜನಸಂಖ್ಯೆ ಮತ್ತು ಆರೋಗ್ಯಕೇಂದ್ರದ ಕುರಿತು ಅಧ್ಯಯನ ನಡೆಸಿದ್ದಾರೆ. ಎ.ಸಿ. ನಾಗಭೂಷಣಮೂರ್ತಿ ಅವರ *'ಧಾರವಾಡ ಜಿಲ್ಲೆಯ ದೇಶಗತಿಗಳು'* ಎಂ.ಎ. ಅಂತಿಮ ವರ್ಷದ ಪದವಿಗಾಗಿ ಸಾದರಪಡಿಸಿದ ಪ್ರಬಂಧದಲ್ಲಿ ಅಮ್ಮಿನಭಾವಿ ಪರಿಸರದ ದೇಶಗತಿಯ ಬಗ್ಗೆ ಅಧ್ಯಯನ ನಡೆಸಿದ್ದಾರೆ.

ಪ್ರಸ್ತುತ ಅಧ್ಯಯನ ಪ್ರದೇಶದ ಬಗ್ಗೆ ಹಲವು ಕೃತಿಗಳು, ಪ್ರಬಂಧಗಳು, ಲೇಖನಗಳು, ರಚಿಸಲ್ಪಟ್ಟಿದ್ದರೂ ಅವುಗಳು ಬೇರೆ-ಬೇರೆ ಗ್ರಂಥಗಳಲ್ಲಿ ಹಂಚಿ ಹೋಗಿವೆ. ಅಲ್ಲದೇ ಅವುಗಳೆಲ್ಲವನ್ನು ಒಂದು ಪ್ರದೇಶದ ಸಮಗ್ರ ಅಧ್ಯಯನ ಎಂದು ಹೇಳಲು ಬರುವದಿಲ್ಲ. ಈ ಅಧ್ಯಯನವು ಸೀಮಿತಗೊಂಡ ಪರಿಸರವನ್ನು ಸಮಗ್ರವಾಗಿ ವಿವರಿಸುವ ಹಾಗೂ ಸೂಕ್ಷ್ಮವಾಗಿ ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

**ಅಧ್ಯಯನದ ವಿಧಾನ:**

ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು ಅಮ್ಮಿನಭಾವಿ ಪರಿಸರದ ಗ್ರಾಮವಾರು ಕ್ಷೇತ್ರಕಾರ್ಯದ ಮೂಲಕ ಪುರಾತತ್ವ ಸಂಸ್ಕೃತಿಗೆ ಸಂಬಂಧಿಸಿದಂತೆ ಮಾಹಿತಿಗಳನ್ನು ಕ್ರೋಡಿಕರಿಸುವುದು. ಮುಖ್ಯವಾಗಿ ಪ್ರಾಗಿತಿಹಾಸ ಕಾಲದ ಅವಶೇಷ, ಶಾಸನ, ದೇವಾಲಯ, ಮೂರ್ತಿಶಿಲ್ಪ ಮುಂತಾದ ಆಕರಗಳ ದಾಖಲೀಕರಣ ಮತ್ತು ಛಾಯಾಚಿತ್ರ, ತಲನಕ್ಷೆಗಳನ್ನು ಮಾಡಿಕೊಳ್ಳಲಾಗಿದೆ. ಅದರೊಂದಿಗೆ ಮೌಖಿಕ ಪರಂಪರೆ, ಪೌರಾಣಿಕ ಸಂಗತಿಗಳು, ಸ್ಥಳೀಯ ಚರಿತ್ರೆ ಮುಂತಾದವುಗಳನ್ನು ಕುರಿತಂತೆ ಮಾಹಿತಿ ಸಂಗ್ರಹಿಸಲಾಗಿದೆ.

ನಂತರದಲ್ಲಿ ಸಂಗ್ರಹಿತ ಆಕರಗಳನ್ನು ಬಳಸಿಕೊಂಡು ವಿಷಯಾನುಸಾರ ವಿಮರ್ಶಿಸಿ, ವಿಶ್ಲೇಷಿಸಿ, ಸಂಯೋಜಿಸಿ, ಅಂತರ್‌ಶಿಸ್ತಿಯ ಅಧ್ಯಯನದ ಮೂಲಕ ಅಮ್ಮಿನಭಾವಿ ಪರಿಸರದ ಪೂರ್ಣ ಚರಿತ್ರೆಯನ್ನು ನಿರೂಪಿಸಲಾಗಿದೆ.

ಪ್ರಸ್ತುತ 'ಅಮ್ಮಿನಭಾವಿ ಪರಿಸರದ ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯ ಈ ನಿಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳಾಗಿ ವಿಭಾಗಿಸಿಕೊಳ್ಳಲಾಗಿದೆ. ಈ ಆರು ಅಧ್ಯಯನಗಳನ್ನು ಒಳಗೊಂಡ ವಿಷಯ ಮತ್ತು ಅದರ ತಾತ್ವಿಕ ಸ್ವರೂಪ ಹೀಗಿದೆ. ಅಧ್ಯಯನದ ಉದ್ದೇಶ, ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ, ವ್ಯಾಪ್ತಿ, ವಿಧಾನಗಳನ್ನು ಮೊದಲನೆಯ ಅಧ್ಯಾಯದಲ್ಲಿ ಸ್ಪಷ್ಟಪಡಿಸಲಾಗಿದೆ.

**ಎರಡನೆಯ ಅಧ್ಯಾಯ**ನದಲ್ಲಿ ಭೌಗೋಳಿಕ ಪರಿಸರದ ವಿವರಣೆಯನ್ನು ಒಳಗೊಂಡಿದ್ದು, ಅಮ್ಮಿನಭಾವಿ ಪರಿಸರದ ಭೌಗೋಳಿಕ ಸ್ಥಾನಮಾನ, ಹವಾಗುಣ, ಜನಸಂಖ್ಯೆ, ಮಣ್ಣು, ಜಲಸಂಪತ್ತು ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ.

**ಮೂರನೆಯ ಅಧ್ಯಾಯ**ದಲ್ಲಿ ಐತಿಹಾಸಿಕ ಹಿನ್ನಲೆಯಾಗಿದ್ದು, ರಾಜಕೀಯ, ಧಾರ್ಮಿಕ, ಆರ್ಥಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಪ್ರಾಮುಖ್ಯತೆಯನ್ನು ಈ ಪ್ರಬಂಧದಲ್ಲಿ ಕಟ್ಟಿಕೊಡಲಾಗುವುದು. ಅಲ್ಲದೇ ಪ್ರಾಗಿತಿಹಾಸ ಮತ್ತು ಇತಿಹಾಸವು ಸಹ ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರುತ್ತವೆ. ಹಾಗೂ ಇದಕ್ಕೆ ಸಂಬಂಧಿಸಿದಂತೆ ಶಾಸನಗಳು ಹಸ್ತಪ್ರತಿಗಳು ಮೊದಲಾದ ಆಕರಗಳನ್ನು ಬಳಸಿಕೊಳ್ಳಲಾಗುವುದು.

**ನಾಲ್ಕನೆಯ ಅಧ್ಯಾಯ**ದಲ್ಲಿ ಅಮ್ಮಿನಭಾವಿ ಪರಿಸರದ ವಾಸ್ತು ಮತ್ತು ಮೂರ್ತಿಶಿಲ್ಪಗಳ ವಿವರಣೆ, ಅದಕ್ಕೆ ಸಂಬಂಧಪಟ್ಟ ದೇವಾಲಯ ಬಸದಿಗಳನ್ನು ಕುರಿತು ಸಮಗ್ರ ಮಾಹಿತಿಯನ್ನು ಕ್ಷೇತ್ರಕಾರ್ಯದ ಮೂಲಕ ಕ್ರೋಢಿಕರಿಸಲಾಗಿದೆ.

**ಐದನೆಯ ಅಧ್ಯಾಯ**ದಲ್ಲಿ ನಂಬಿಕೆ ಆಚರಣೆಗೆ ಸಂಬಂಧಿಸಿದಂತೆ ಸ್ಥಳೀಯರ ಸಂಘ ಸಂಸ್ಥೆಗಳ ಹಾಗೂ ಪ್ರಮುಖ ವ್ಯಕ್ತಿಗಳ ನೆರವನ್ನು ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಪಡೆಯಲಾಗಿದೆ.

ಕೊನೆಯ ಅಧ್ಯಾಯ ಸಮಾರೋಪವಾಗಿದ್ದು, ಪ್ರಸ್ತುತ ಅಧ್ಯಾಯದಲ್ಲಿ ಕಂಡುಕೊಂಡ ಪ್ರಮುಖ ಸಂಗತಿಗಳ ಸಮೀಕ್ಷೆ, ಫಲಿತಗಳನ್ನು ಅಲ್ಲದೆ ನಿರ್ಧಾರಗಳನ್ನು ಪ್ರಕಟಿಸುವ ಪ್ರಯತ್ನವನ್ನು ಮಾಡಲಾಗಿದೆ.

ಹೀಗೆ ಅಮ್ಮಿನಭಾವಿ ಪರಿಸರದ ಸಾಂಸ್ಕೃತಿಕ ಅಧ್ಯಯನಗಳ ಸಮಗ್ರ ಚಿತ್ರಣವನ್ನು ಈ ಅಧ್ಯಯನದಲ್ಲಿ ಪ್ರಕಟಿಸಲಾಗಿದೆ.

## ಅಧ್ಯಾಯ – ಎರಡು
## ಭೌಗೋಳಿಕ ಪರಿಸರ

ಒಂದು ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಯ ಬೆಳವಣಿಗೆಯಲ್ಲಿ ಅಲ್ಲಿಯ ಭೌಗೋಳಿಕ ಪರಿಸರ ಮತ್ತು ನೈಸರ್ಗಿಕ ಸಂಪತ್ತು ಬಹುಮುಖ್ಯ ಪ್ರಭಾವ ಬೀರುತ್ತವೆ. ಆಡಳಿತದ ಅನುಕೂಲತೆಗಾಗಿ ವಿಭಾಗಗಳನ್ನು ಮಾಡುವಾಗ ಈ ನೈಸರ್ಗಿಕ ಅಂಶಗಳನ್ನವಲಂಬಿಸಿರುವುದು ತಿಳಿದುಬರುತ್ತದೆ. ಪ್ರಾಚೀನ ನಾಗರೀಕತೆಗಳ ಉಗಮ ನದಿ ದಂಡೆಗಳ ಮೇಲೆ ಆಗಿರುವುದನ್ನು ಗಮನಿಸಿದಾಗ ಭೌಗೋಳಿಕ ಅಂಶಗಳ ಪ್ರಾಮುಖ್ಯತೆಯನ್ನು ತಿಳಿಯಬಹುದು. ಈ ಹಿನ್ನೆಲೆಯಲ್ಲಿ ಆಯಾ ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಯನ್ನು ತಿಳಿಯಲು ಭೌಗೋಳಿಕ ಅಂಶಗಳು ಸಹಕಾರಿಯಾಗಿವೆ.

ಒಂದು ಪ್ರದೇಶದಲ್ಲಿ ಮಾನವನು ನೆಲೆನಿಲ್ಲಲು ಆ ಪ್ರದೇಶದಲ್ಲಿ ಹುಟ್ಟಿ ಹರಿಯುವ ನದಿಗಳು, ನದಿಬಯಲು, ತೀರ ಪ್ರದೇಶ, ಪರ್ವತಶ್ರೇಣಿ, ಭೂಗರ್ಭ ಸಂಪತ್ತು, ಅರಣ್ಯ ಸಂಪತ್ತು, ಹವಾಗುಣ, ಉಷ್ಣಾಂಶ, ರೇಖಾಂಶ, ಮಣ್ಣಿನ ರಚನೆ ಮುಂತಾದ ಭೌಗೋಳಿಕ ಅಂಶಗಳು ಕಾರಣವಾಗಿವೆ. ಅಮ್ಮಿನಭಾವಿ ಪರಿಸರದ ಚರಿತ್ರೆಯ ಅಧ್ಯಯನಕ್ಕೆ ತೊಡಗುವ ಮೊದಲು ಆ ಪ್ರದೇಶದ ಭೌಗೋಳಿಕ ಲಕ್ಷಣಗಳು ಯಾವ ರೀತಿ ಪ್ರಭಾವ ಬೀರಿವೆ ಎಂದು ತಿಳಿದುಕೊಳ್ಳುವದು ಅಗತ್ಯವಾಗಿದೆ. ಧಾರವಾಡ ಜಿಲ್ಲೆಯಿಂದ ಈಶಾನ್ಯಕ್ಕಿರುವ ಅಮ್ಮಿನಭಾವಿಯು ಐತಿಹಾಸಿಕ ಪ್ರದೇಶವಾಗಿದೆ. ಈ ಪ್ರದೇಶದ ಜನಜೀವನ ಮತ್ತು ಇತಿಹಾಸ ಅಲ್ಲಿನ ಭೌಗೋಳಿಕ ಪರಿಸರ ಮತ್ತು ನೈಸರ್ಗಿಕ ಸಂಪತ್ತಿನ ಹಿನ್ನಲೆಯಿಂದ ಪ್ರಭಾವಿತವಾಗಿದೆ. ಮಾನವನು ಸ್ವಾಭಾವಿಕವಾಗಿ ನೈಸರ್ಗಿಕ ಸಂಪನ್ಮೂಲಗಳನ್ನು ಅವಲಂಭಿಸಿರುತ್ತಿದ್ದನು. ನೆಲದ ಗುಣ, ಖನಿಜ ಸಂಪತ್ತು, ನದಿಗಳು, ಪರ್ವತಗಳು

ಮೊದಲಾದ ಸಂಪನ್ಮೂಲಗಳು ಅಲ್ಲಿನ ನಿವಾಸಿಗಳ ಕಸಬು, ಉಡುಗೆ, ತೊಡುಗೆ, ಧಾರ್ಮಿಕ ಸ್ವಭಾವ, ಆಚಾರಗಳು ವಿಚಾರಗಳನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ.[೧]

ಅಮ್ಮಿನಭಾವಿ ಪ್ರದೇಶಕ್ಕೆ ಮೇರೆಯಾಗಿ ಉತ್ತರಕ್ಕೆ ಸವದತ್ತಿ, ದಕ್ಷಿಣಕ್ಕೆ ಕಲಘಟಗಿ, ಪೂರ್ವಕ್ಕೆ ನವಲಗುಂದ ಮತ್ತು ಪಶ್ಚಿಮಕ್ಕೆ ಖಾನಾಪುರ ತಾಲೂಕುಗಳಿವೆ. ಅಮ್ಮಿನಭಾವಿ ಸುತ್ತಮುತ್ತ ಹನ್ನೊಂದು ಸಣ್ಣ ಪುಟ್ಟ ಹಳ್ಳಿಗಳಿವೆ. ಅವುಗಳೆಂದರೆ, ಕರಡಿಗುಡ್ಡ, ತಿಮ್ಮಾಪುರ, ಮರೆವಾಡ, ನರೇಂದ್ರ, ಚಂದನಮಟ್ಟಿ, ಕವಲಗೇರಿ, ಕನಕೂರು, ಕರುಡಾಪುರ, ಮಾರಡಗಿ, ತಲವಾಯಿ, ಹೆಬ್ಬಳ್ಳಿ ಪ್ರದೇಶಗಳವರೆಗೆ ವ್ಯಾಪ್ತಿಯನ್ನು ಇಟ್ಟುಕೊಳ್ಳಲಾಗಿದೆ. ಅಮ್ಮಿನಭಾವಿ ಪ್ರದೇಶವು ಉತ್ತರ ಅಕ್ಷಾಂಶ $15^0$–19' ರಿಂದ $15^0$–32' ಮತ್ತು ಪೂರ್ವ ರೇಖಾಂಶ $74^0$–49'ರಿಂದ $75^0$–35'ರ ಮಧ್ಯದಲ್ಲಿದೆ.[೨] ಈ ಪ್ರದೇಶವು 11499.04 ಎಕರೆಗಳಷ್ಟು ಭೂಕ್ಷೇತ್ರವನ್ನು ಹೊಂದಿದೆ. ಇದರಲ್ಲಿ 10922.02 ಎಕರೆಗಳಷ್ಟು ಭೂಮಿಯು ಸಾಗುವಳಿ ಭೂಮಿಯಿಂದ ಕೂಡಿದೆ. 102.27 ಎಕರೆಗಳಷ್ಟು ಗೋಮಾಳ ಹೊಂದಿದೆ.

ಅಮ್ಮಿನಭಾವಿ ಪ್ರದೇಶದ ಜನಸಂಖ್ಯೆಯು 2001 ರ ಜನಗಣತಿಯ ಪ್ರಕಾರ 10.894 ಇದ್ದು, ಇದರಲ್ಲಿ ಪುರುಷರು 5.632 ಮತ್ತು ಮಹಿಳೆಯರು 5.262 ಇರುವರು. ಇಲ್ಲಿಯ ಸಾಕ್ಷರತೆಯ ಪ್ರಮಾಣ ಶೇ. 65% ಹೊಂದಿದೆ. ಇದರಲ್ಲಿ ಪುರುಷರ ಸಾಕ್ಷರತೆಯು ಶೇ. 65%ರಲ್ಲಿದ್ದರೆ, ಸ್ತ್ರೀಯರ ಸಾಕ್ಷರತೆಯ ಪ್ರಮಾಣವು ಶೇ. 60% ರಷ್ಟಿದೆ.

ಈ ಪರಿಸರವು ಸ್ವಲ್ಪಭಾಗ ಸಮತಟ್ಟಾಗಿದ್ದು ಅಲ್ಲಲ್ಲಿ ಏರು–ತಗ್ಗುಗಳಿಂದ ಕೂಡಿದೆ, ಇಲ್ಲಿಯ ಭೂಮಿಯೂ ಬಹುಮಟ್ಟಿಗೆ ವಿವಿಧ ಪ್ರಕಾರದ ವಿಭಜಿತ ಶಿಲಾಮಿಶ್ರಣದಿಂದ ಕೂಡಿರುವುದು ಕಂಡುಬರುತ್ತದೆ. ಕಪ್ಪು ಮಣ್ಣು, ಕೆಂಪುಮಣ್ಣು, ಮಸಾರಿ ಮಣ್ಣು, ಮಡಿಕಟ್ಟು, ರೇವೆ ಮಣ್ಣಿನಿಂದ[೩] ಕೂಡಿದ ಕೃಷಿಗೆ ಯೋಗ್ಯವಾದ ಭೂಮಿಯನ್ನು ಹೊಂದಿದೆ. ಜನರು ತಮ್ಮ ಮನೆಗಳನ್ನು ಎತ್ತರವಾದ ಪ್ರದೇಶದಲ್ಲಿ ನಿರ್ಮಿಸಿಕೊಂಡು, ಇಳಿಜಾರು ಪ್ರದೇಶಗಳಲ್ಲಿ ವ್ಯವಸಾಯ ಕೈಗೊಳ್ಳಲು ಯೋಗ್ಯ ಭೂಮಿಯನ್ನು ಹೊಂದಿದ್ದಾರೆ. ಅಲ್ಲದೇ ಬಯಲು ಪ್ರದೇಶದಲ್ಲಿ ಮತ್ತು ಗುಡ್ಡದ ಮೇಲೆ ಮರಳು ಮತ್ತು ಕಪ್ಪು ಮಣ್ಣಿನ ಗುಡ್ಡಗಳನ್ನು ಕಾಣುತ್ತೇವೆ. ಕೆಲವೊಂದು ಸ್ಥಳಗಳಲ್ಲಿ ಸುಣ್ಣದ ಕಲ್ಲುಗಳು ಶಿಲೆಗಳು ಕೆಲವು ಪ್ರದೇಶಗಳಲ್ಲಿ ವಿರಳವಾಗಿ ಕಂಡುಬರುತ್ತವೆ. ಒಟ್ಟಾರೆ ಧಾರವಾಡ ಶಿಲಾವರ್ಗ ಶ್ರೇಣಿ ವಿಶೇಷ ಖನಿಜ ಸಂಪತ್ತಿನಿಂದ ಕೂಡಿರುವದನ್ನು ಈ ಪರಿಸರದಲ್ಲಿ ಕಾಣಬಹುದಾಗಿದೆ.

ಅಮ್ಮಿನಭಾವಿ ಪ್ರದೇಶವು ನೈಸರ್ಗಿಕ ನದಿ ಸಂಪತ್ತನ್ನು ಒಳಗೊಂಡಿದೆ. ಈ ಪ್ರದೇಶದಲ್ಲಿ ಬೇಡ್ತಿ ನದಿಯು ನೈರುತ್ಯಾಭಿಮುಖವಾಗಿ ಹರಿದು ಅರಬ್ಬಿಸಮುದ್ರವನ್ನು

ಸೇರುತ್ತದೆ. ಇದು ಕೃಷಿ ನೀರಾವರಿಗೆ ಯೋಗ್ಯವಾದ ಸ್ಥಾನವನ್ನು ಒದಗಿಸಿಕೊಟ್ಟ ಪ್ರದೇಶದಲ್ಲಿ ಮುಖ್ಯವಾಗಿ ಬೆಣ್ಣಿಹಳ್ಳ ನದಿಯ ಪಾತ್ರವನ್ನು ನಿರ್ವಹಿಸಿದೆ. ಇತರೆ ಸಣ್ಣ ಪುಟ್ಟ ಹಳ್ಳಗಳಾದ ತುಪ್ಪರಿಹಳ್ಳ, ತಟ್ಟಹಳ್ಳ, ಹಂದಿಗನಹಳ್ಳ, ಮಕಾಸಿಹಳ್ಳ ಪ್ರಮುಖವಾದುದು.

ಈ ಒಂದು ಪ್ರದೇಶದಲ್ಲಿ ಜನರ ಬಳಕೆಗೆ ಹಾಗು ಸ್ವಲ್ಪಮಟ್ಟಿನ ಕೃಷಿಗೆ ನೀರನ್ನು ಒದಗಿಸುವಲ್ಲಿ ಕೆರೆಗಳು ಪ್ರಮುಖ ಪಾತ್ರವಹಿಸಿವೆ. ಇವು ಮಳೆಗಾಲದಲ್ಲಿ ಮಾತ್ರ ತುಂಬಿ, ಬೇಸಿಗೆಯಲ್ಲಿ ಬತ್ತಿ ಹೋಗುತ್ತವೆ. ಇಲ್ಲಿಯ ರೈತರು ವ್ಯವಸಾಯಕ್ಕೆ ಬಾವಿಗಳನ್ನೇ ನಂಬಿಕೊಂಡಿದ್ದರೂ ಇತ್ತೀಚಿನ ವರ್ಷಗಳಲ್ಲಿ ಕೊಳವೆ ಬಾವಿಗಳಿಂದಾಗಿ ಅಂತರ್ಜಲ ಮಟ್ಟ ಇಳಿಮುಖವಾಗಿ ಕೆಲವೇ ರೈತರು ಮಾತ್ರ ಬಾವಿಗಳ ನೀರಿನಿಂದ ವ್ಯವಸಾಯ ಮಾಡುತ್ತಿದ್ದಾರೆ. ಇಲ್ಲಿಯ ಜನರ ಮುಖ್ಯ ವೃತ್ತಿ ವ್ಯವಸಾಯವಾಗಿದ್ದರಿಂದ ಇಲ್ಲಿ ಒಣಬೇಸಾಯ ಮತ್ತು ನೀರಾವರಿ ಪದ್ಧತಿಗಳನ್ನು ಅನುಸರಿಸಲಾಗುತ್ತಿತ್ತು. ಭೂಮಿಯನ್ನು ದತ್ತಿ ನೀಡುವುದು ಶ್ರೇಷ್ಠ ಎಂದು ಭಾವಿಸಲಾಗಿತ್ತು. ದತ್ತಿಗಳನ್ನು ತಿಳಿಸುವ ಶಾಸನಗಳಲ್ಲಿ ಭೂದಾನವನ್ನು ತಿಳಿಸುವ ಶಾಸನಗಳೇ ಹೆಚ್ಚಿನ ಪ್ರಮಾಣದಲ್ಲಿವೆ.

ಪಶ್ಚಿಮ ಕರಾವಳಿಯಿಂದ ಬೀಸುವ ಮುಂಗಾರು ಮಾರುತಗಳು ಇಲ್ಲಿನ ವ್ಯವಸಾಯಕ್ಕೆ ಹೆಚ್ಚು ಅನುಕೂಲರವಾಗಿದೆ. ಕೃಷಿ ವಿಧಾನದಲ್ಲಿ ಜನರು ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಕೃಷಿ ಕಾರ್ಯದಲ್ಲಿ ವೈಜ್ಞಾನಿಕ ಸಲಕರಣೆಗಳನ್ನು ಬಳಸುತ್ತಿರುವದು, ಹಾಗೂ ಹೈಬ್ರಿಡ್ ತಳಿಗಳ ಬೀಜದ ಉಪಯೋಗದಿಂದ ಇಲ್ಲಿನ ವ್ಯವಸಾಯವು ಹಸಿರು ಕ್ರಾಂತಿಯ ದ್ಯೋತಕವಾಗಿ ಕಂಡು ಬರುತ್ತದೆ.

ಇಲ್ಲಿನ ಪರಿಸರವು ಕೃಷಿಯೊಂದಿಗೆ ಕೃಷಿಯೇತರ ಚಟುವಟಿಕೆಗಳಿಗೂ ಸಹ ಅಷ್ಟೇ ಮಹತ್ವದ ಸ್ಥಾನವನ್ನು ಒದಗಿಸಿಕೊಟ್ಟಿದೆ. ಅಂದರೆ ಸುತ್ತಮುತ್ತಲಿನ ಕೈಗಾರಿಕೆಗಳು ಈ ಪ್ರದೇಶದ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. ವ್ಯವಸಾಯದ ಜೊತೆಗೆ ಮಡಿಕೆ ತಯಾರಿಕೆ, ಮರಗೆಲಸಗಳನ್ನು ಮಾಡುತ್ತಾರೆ, ಬುಟ್ಟಿ ಮತ್ತು ಹಲವಾರು ವಸ್ತುಗಳನ್ನು ತಯಾರು ಮಾಡಿಕೊಂಡು ತಾಲೂಕಿನ ಎಲ್ಲಾ ಕಡೆಗೆ ಸರಬರಾಜು ಮಾಡುತ್ತಿರುವದನ್ನು ಗಮನಿಸಿದರೆ ಹಲವಾರು ಗೃಹಕೈಗಾರಿಕೆಗಳು ಇರುವುದನ್ನು ಕಾಣಬಹುದು.

ಅಮ್ಮಿನಭಾವಿ ಪ್ರದೇಶದ ಹವಾಗುಣವು ಸಾಧಾರಣವಾಗಿ ಉತ್ತಮ ರೀತಿಯದು. ಇಲ್ಲಿ ಮಾರ್ಚ/ಏಪ್ರಿಲ್‌ದಿಂದ ಮೇ ತಿಂಗಳ ಅಂತ್ಯದವರೆಗೆ ಗರಿಷ್ಟ ಉಷ್ಣಾಂಶ (4.05)

ಇರುತ್ತದೆ. ಜೂನ್ ತಿಂಗಳಿನಿಂದ ಅಕ್ಟೋಬರ್ ಅಂತ್ಯದವರೆಗೆ ಸುಮಾರು 726 ಮಿ.ಮಿ. ಮಳೆಯಾಗುತ್ತದೆ. ನವಂಬರ ತಿಂಗಳಿನಿಂದ ಜನವರಿ/ಫೆಬ್ರವರಿ ತಿಂಗಳಿನವರೆಗೆ ಸಾಧಾರಣಕ್ಕಿಂತ ಸ್ವಲ್ಪ ಮಟ್ಟಿನ ಹೆಚ್ಚು ಚಳಿಗಾಲ ಕಂಡು ಬರುತ್ತದೆ.

ಜಿಲ್ಲೆಯ ಪಶ್ಚಿಮದ ಗುಡ್ಡಗಾಡು ಪ್ರದೇಶ ಮತ್ತು ಬಯಲು ಪ್ರದೇಶವೆಂದು ವಿಂಗಡಿಸಲಾಗಿದೆ. ಇವುಗಳಲ್ಲಿ ಎತ್ತರದ ಪ್ರದೇಶಗಳು ಬೋಳಾಗಿದ್ದು, ದಟ್ಟವಾದ ಹುಲ್ಲು ಪ್ರದೇಶದಿಂದ ಕೂಡಿದೆ. ಈ ಪರಿಸರದಲ್ಲಿ ಕೆಲವೊಂದು ಪ್ರದೇಶಗಳು ಪೂರ್ಣವಾಗಿ ಮುಳ್ಳುಗಳಿಂದ ಕೂಡಿದ ಗಿಡಗಳು ಮತ್ತು ಕುರುಚಲು ಗಿಡಗಳಿಂದ ಕೂಡಿದ ಕಾಡು ಪ್ರದೇಶವನ್ನು ಕಾಣುತ್ತೇವೆ. ಇವು ಮುಖ್ಯವಾಗಿ ಮಲೆನಾಡಿಗೆ ಮಾತ್ರ ಸೀಮಿತವಾಗಿ ಕಂಡು ಬರುತ್ತದೆ. ಈ ಪ್ರದೇಶದಲ್ಲಿ ಅಲ್ಲಲ್ಲಿ ಸಾಗುವಾನಿ ಮರಗಳು ವಿರಳವಾಗಿ ಕಂಡುಬರುತ್ತವೆ. ಉಳಿದಂತೆ ಮಾವಿನ ಮರಗಳು, ಬೇವಿನ ಮರಗಳು, ಹುಣಸೆ, ಊಚಲು ಗಿಡಗಳು, ನೇರಳೆ ಮರಗಳು ಮತ್ತು ಇನ್ನಿತರ ಕೆಲ ಸಸ್ಯಗಳು ಮುಖ್ಯವಾಗಿ ಕಂಡು ಬರುತ್ತದೆ. ಕೆಲ ಸಸ್ಯಗಳು ಹಾಲು ತುಂಬಿದ ಮುಳ್ಳುಗಳಿಂದ ಕೂಡಿದ ಸಸ್ಯಗಳಾಗಿವೆ. ಇವುಗಳಲ್ಲಿ ಪಾಪಾಸುಕಳ್ಳಿ ಮತ್ತು ತೋಟದ ಕಳ್ಳಿಗಿಡ ಎಕ್ಕದ ಗಿಡಗಳನ್ನು ಕಾಣಬಹುದು. ಇವುಗಳು ವರ್ಷದ ಎಲ್ಲಾ ಕಾಲದಲ್ಲೂ ಹಸಿರಾಗಿರುತ್ತವೆ. ಇನ್ನು ಹಣ್ಣು ಗಿಡಗಳು ಸಾಮಾನ್ಯವಾಗಿ ಈ ಪ್ರದೇಶದಲ್ಲಿ ಕಂಡುಬರುತ್ತದೆ. ಅವುಗಳೆಂದರೆ ಸೀತಾಫಲ, ಸೀಬೆಹಣ್ಣು, ಪಪ್ಪಾಯಿ ಹಣ್ಣು, ಹೆಚ್ಚಾಗಿ ಮಾವಿನ ಹಣ್ಣಿನ ಗಿಡಗಳನ್ನು ಈ ಪರಿಸರದಲ್ಲಿ ಕಾಣಬಹುದು.

ಅಮ್ಮಿನಭಾವಿ ಪ್ರದೇಶದಲ್ಲಿ ತೋಟದ ಬೆಳೆಗಳು ಮುಖ್ಯವಾಗಿ ಕಂಡು ಬರುತ್ತವೆ. ನರೇಂದ್ರದಲ್ಲಿ ಎಲೆಬಳ್ಳಿಯ ತೋಟಗಳು ಯಥೇಚ್ಛವಾಗಿವೆ.* ಇಲ್ಲಿ 1800 (ಸಾವಿರದ ಎಂಟು ನೂರು) ಎಲೆಬಳ್ಳಿ ತೋಟಗಳಿದ್ದ ಬಗ್ಗೆ ತಿಳಿದು ಬರುತ್ತದೆ. ಏಕೆಂದರೆ ಬಳ್ಳಿಗಳಿಂದ ಹೆಚ್ಚಾಗಿ ಎಲೆಗಳನ್ನು ಬೆಳೆಯುವರು. ಇಲ್ಲಿಯ ಎಲೆಬಳ್ಳಿಯ ತೋಟವನ್ನು ಸಾವಿರ ಬಳ್ಳಿಯ ತೋಟ ಎಂದು ಉಲ್ಲೇಖಿಸಲಾಗಿದೆ.

ಈ ಪರಿಸರದ ಬೆಳೆಗಳನ್ನು ವರ್ಷದ ಎರಡು ಅವಧಿಯಲ್ಲಿ ಬೆಳೆಯುತ್ತಾರೆ. ಅವುಗಳೇ ಮುಂಗಾರು ಬೆಳೆಗಳು ಮತ್ತು ಹಿಂಗಾರು ಬೆಳೆಗಳು ಆಗಿವೆ. ಶೇಂಗಾ, ಹೆಸರು, ಆಲೂಗಡ್ಡೆ, ಅಲಸಂಧಿ, ಈರುಳ್ಳಿ, ಹತ್ತಿ, ಬಿಳಿಜೋಳ, ಗೋಧಿ, ಕಡಲೆ ಮತ್ತು ಕುಸುಬೆ ಇವು ಇಲ್ಲಿಯ ಸರ್ವಸಾಮಾನ್ಯವಾಗಿ ಬೆಳೆಯುವ ಬೆಳೆಗಳಾಗಿವೆ. ಈ ಎಲ್ಲ ಬೆಳೆಗಳು ಇಂತಾ ಹವಾಮಾನಕ್ಕೆ ತಕ್ಕಂತೆ ಮುಂಗಾರು ಬೆಳೆಗಳು ಅಂದರೆ (ಖಾರಿಫ) ಬೆಳೆಗಳಾಗಿವೆ. ಅವುಗಳಲ್ಲಿ ಶೇಂಗಾ, ಜೋಳ, ಆಲೂಗಡ್ಡೆ, ಹತ್ತಿ, ಹೆಸರು, ಅಲಸಂಧಿ, ಈರುಳ್ಳಿ, ಮೆಣಸಿನಕಾಯಿ ಮತ್ತು

ಉದ್ದು ಮುಖ್ಯವಾಗಿದೆ.  ಇನ್ನು ಹಿಂಗಾರು (ರಭಿ) ಬೆಳೆಯಾಗಿ ಜೋಳ, ಗೋಧಿ, ಕಡಲೆ, ಸೂರ್ಯಕಾಂತಿಯನ್ನು ಕಾಣಬಹುದಾಗಿದೆ.

ಅಮ್ಮಿನಭಾವಿ ಪ್ರದೇಶದಲ್ಲಿ ಗೊಂಡಾರಣ್ಯಗಳಿಲ್ಲದಿರುವ ಪ್ರಯುಕ್ತ ಇಲ್ಲಿ ಶುಷ್ಕ ವಾತಾವರಣದ ನರಿ, ತೋಳ, ಕತ್ತೆಕಿರುಬ ಮುಂತಾದವುಗಳನ್ನು ಕಾಣಬಹುದಾಗಿದೆ. ಅದೇ ರೀತಿ ಸಸ್ಯಹಾರಿಗಳಾದ ಮುಂಗುಸಿ, ಮುಳ್ಳುಹಂದಿ, ಮೊಲ ವಿಷಜಂತುಗಳಾದ ನಾಗರ, ಗೋಧಿನಾಗರ, ಕೆಲ ಜಾತಿಯ ಹಾವುಗಳು ಕಂಡುಬರುತ್ತದೆ. ಪ್ರದೇಶದ ಸಾಕು ಪ್ರಾಣಿಗಳೆಂದರೆ ನಾಯಿ, ಬೆಕ್ಕು, ಕತ್ತೆ, ಕುದುರೆ, ಆಡು, ಮೆಕೆ, ಆಕಳು, ಎತ್ತು, ಎಮ್ಮೆ ಮುಂತಾದ ಪ್ರಾಣಿಗಳು ಸಾಕು ಪ್ರಾಣಿಗಳಾಗಿವೆ.  ನವಿಲು, ಪಾರಿವಾಳ, ಕಾಗೆ ಕೊಕ್ಕರೆ ಇನ್ನಿತರ ಕೆಲ ಪಕ್ಷಿ ಸಂಕುಲಗಳು ಈ ಪರಿಸರದಲ್ಲಿ ಕಾಣಬಹುದಾಗಿದೆ.

**ಅಡಿಟಿಪ್ಪಣಿಗಳು :**

---

೧ ಕಟ್ಟಿ ವೆಂಕಟರಂಗೂ, ೧೯೮೪, ಧಾ.ಜಿ.ಗೇ., ಏಶಿಯನ್ ಏಜ್ಯುಕೇಶನ್ ಸರ್ವಿಸಸ್, ನವದೆಹಲಿ.

೨ ಧಾ.ಜಿ.ದೇ.ಕೋ. ಪುಟ ೧೩.

೩ ಕ.ವಿ. ವಿಶ್ವಕೋಶ ಸಂಪುಟ–೨, ಪುಟ ೬೬.

೪ ಅದೇ ಪುಟ.

೫ ಇ.ಐ., XIII, ಪುಟ ೩೧೬, ನರೇಂದ್ರ, ಕ್ರಿ.ಶ. ೧೧೨೩, ೧೧೨೫, ೧೧೨೬

# ಅಧ್ಯಾಯ – ಮೂರು
# ಐತಿಹಾಸಿಕ ಹಿನ್ನೆಲೆ

ಅಮ್ಮಿನಭಾವಿ ಪರಿಸರವು ಐತಿಹಾಸಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕವಾಗಿ ಪ್ರಸಿದ್ಧಿಯನ್ನು ಪಡೆದಿದೆ. 'ಅಮ್ಮಿನಭಾವಿ ಧರಿತ್ರಿಯೊಳಗ್ರಹಾರದೊಳ್ತಿಕವೋಲ್ವಿ ರಾಜಿಪುದೇಂ' ಎಂಬಂತೆ ಶಾಸನಗಳಲ್ಲಿ ಈ ಪ್ರದೇಶವನ್ನು ಅಗ್ರಹಾರವೆಂದು ಹೇಳಲಾಗಿದೆ. ಈ ಪ್ರದೇಶದಲ್ಲಿ ಪ್ರಾಗಿತಿಹಾಸ ಕಾಲದಿಂದಲೂ ಮಾನವನ ಚಟುವಟಿಕೆಗಳು ನಡೆದ ಬಗ್ಗೆ ಕುರುಹುಗಳು ಕಂಡುಬರುತ್ತವೆ. ಹೀಗಾಗಿ ಅಮ್ಮಿನಭಾವಿಯು ಮೇಲ್ಕಂಡ ಅಂಶಗಳಿಗೆ ಸಂಬಂಧಿಸಿದಂತೆ ತನ್ನ ಮಹತ್ವವನ್ನು ಕಾಯ್ದುಕೊಂಡಿದೆ.

**ಪ್ರಾಗಿತಿಹಾಸ:**

ಗತಕಾಲದ ಮಾನವನ ಇತಿಹಾಸವನ್ನು ಅರಿಯದೇ ನಾವು ಇಂದಿನ ಹಾಗೂ ಮುಂದಿನ ಚರಿತ್ರೆಯನ್ನು ಅಧ್ಯಯನ ಮಾಡುವುದು ಕಷ್ಟಸಾಧ್ಯ. ಮಾನವನ ಹುಟ್ಟು ಅವನ ಇರುವಿಕೆ ಹಂತ-ಹಂತವಾಗಿ ಅವನು ಬೆಳೆದು ಬಂದ ರೀತಿ, ಜೀವನೋಪಾಯಕ್ಕಾಗಿ ಉಪಯೋಗಿಸಿದಂತಹ ವಿವಿಧ ವಸ್ತುಗಳು, ಉಪಕರಣಗಳ ಬಗ್ಗೆ ತಿಳಿಯುವುದು ಅವಶ್ಯ. ಮಾನವನ ಇತಿಹಾಸವನ್ನು ಪ್ರಮುಖವಾಗಿ ಎರಡು ಹಂತಗಳಲ್ಲಿ ವಿಂಗಡಿಸಲಾಗಿದೆ. ಮೊದಲನೆಯದು ಅಕ್ಷರ ಜ್ಞಾನವಿಲ್ಲದ ಹಂತವೆಂದು, ಇದನ್ನು ಪ್ರಾಗಿತಿಹಾಸ ಕಾಲ ಎಂತಲೂ, ಎರಡನೆಯದು ಅಕ್ಷರ ಜ್ಞಾನವಿದ್ದ ಹಂತ, ಇದನ್ನು ಇತಿಹಾಸ ಕಾಲವೆಂದು ಹೇಳಬಹುದು.

ಪ್ರಾಗಿತಿಹಾಸದಲ್ಲಿ ಶಿಲಾಯುಗ ಸಂಸ್ಕೃತಿ ಮತ್ತು ಲೋಹಸಂಸ್ಕೃತಿ ಎಂಬ ಎರಡು ಭಾಗಗಳಿವೆ. ಶಿಲಾಯುಗ ಸಂಸ್ಕೃತಿಯಲ್ಲಿ ಮತ್ತೆ ಹಳೆಯ ಶಿಲಾಯುಗ, ಸೂಕ್ಷ್ಮಶಿಲಾಯುಗ, ಮತ್ತು ನೂತನ ಶಿಲಾಯುಗ ಎಂದು ವರ್ಗೀಕರಿಸಲಾಗಿದೆ. ಹಳೆ ಶಿಲಾಯುಗದಲ್ಲಿ ಆದಿಹಳೆ

ಶಿಲಾಯುಗ, ಮಧ್ಯ ಹಳೆಶಿಲಾಯುಗ ಮತ್ತು ಅಂತಿಮ ಹಳೆಶಿಲಾಯುಗವೆಂದು ವಿಭಾಗಿಸಲಾಗಿದೆ. ಅನಂತರ ಲೋಹಯುಗದ ಆರಂಭದಲ್ಲಿ ಶಿಲೆಯ ಬಳಕೆಯ ಜೊತೆಗೆ ತಾಮ್ರದ ಬಳಕೆಯೂ ಇದ್ದುದ್ದು ಕಂಡುಬರುವುದರಿಂದ, ಈ ಹಂತವನ್ನು ಶಿಲಾ ತಾಮ್ರಯುಗ ಸಂಸ್ಕೃತಿ ಹಾಗೂ ಕಬ್ಬಿಣ ಯುಗದ ಬೃಹತ್ ಶಿಲಾಗೋರಿ ಅಥವಾ ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗಿದೆ.

**ನೆಲೆಗಳು:**

ಧಾರವಾಡ ಜಿಲ್ಲೆಯು ಆದಿಶಿಲಾಯುಗದಿಂದಲೇ ಮಾನವನ ನೆಲೆಗಳನ್ನು ಹೊಂದಿದ್ದರ ಬಗ್ಗೆ ಅನೇಕ ಕುರುಹುಗಳು ಪ್ರಚುರಪಡಿಸುತ್ತದೆ. ಖ್ಯಾತ ಭೂವಿಜ್ಞಾನಿ ಹಾಗೂ ಶಾಸನಶಾಸ್ತ್ರಜ್ಞ ರಾಬರ್ಟ ಬ್ರೂಸ್‌ಪೂಟ್ ಅವರು ಮಲಪ್ರಭಾ ಮತ್ತು ಬೆಣ್ಣೆಹಳ್ಳಗಳ ಸಂಗಮ ಸ್ಥಳಗಳಲ್ಲಿ ಆದಿಶಿಲಾಯುಗದ ಆಯುಧವುಳ್ಳ ನೆಲೆಗಳನ್ನು ಗುರುತಿಸಿದರು. ಕರ್ನಲ್ ಮೇಕಂಜೆ, ಎಂ.ಎಚ್. ಕೃಷ್ಣ, ಆರ್. ಶೇಷಾದ್ರಿ, ಎಚ್.ಡಿ. ಸಂಕಾಲಿಯಾ, ಆರ್.ಎಸ್. ಪಪ್ಪು ಹಾಗೂ ಅ. ಸುಂದರ ಅಲ್ಲದೆ ಇನ್ನು ಹಲವು ವಿದ್ವಾಂಸರು ಕೈಗೊಂಡಿರುವ ಸರ್ವೇಕ್ಷಣೆಯ ಫಲವಾಗಿ ನೂರಾರು ಹಳೆಯ ಶಿಲಾಯುಗ, ಮಧ್ಯ ಶಿಲಾಯುಗ ಅಂತಿಮ ಶಿಲಾಯುಗ, ಅಲ್ಲದೇ ನವ ಶಿಲಾಯುಗದ ಪಳೆಯುಳಿಕೆಗಳನ್ನು ಪತ್ತೆ ಹಚ್ಚಿದ್ದಾರೆ. ಅಮ್ಮಿನಭಾವಿ ಪರಿಸರದ ಕಲ್ಲಾಪುರ[೧] ಗ್ರಾಮದಲ್ಲಿ ಹಳೆಶಿಲಾಯುಗದ ನೆಲೆಯನ್ನು, ಯಾದವಾಡ[೨]ದಲ್ಲಿ ಮಧ್ಯ ಹಳೆಶಿಲಾಯುಗದ ನೆಲೆ, ವೀರಾಪುರ[೩]ದಲ್ಲಿ ಸೂಕ್ಷ್ಮಶಿಲಾಯುಗದ ನೆಲೆಗಳನ್ನು ಪತ್ತೆ ಹಚ್ಚಿದ್ದಾರೆ. ಪ್ರಸ್ತುತ ಅಮ್ಮಿನಭಾವಿ ಪರಿಸರಕ್ಕೆ ಸಂಬಂಧಿಸಿದಂತೆ ಬೆನಕನಮಟ್ಟಿಯಲ್ಲಿ ಆದಿ ಹಳೆಶಿಲಾಯುಗದ ಅವಶೇಷಗಳು[೪] ಹಾಗೂ ನವಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಆಯುಧೋಪಕರಣಗಳು ದೊರೆತಿವೆ.[೫]

**ಬಳಸಿದ ಶಿಲಾಮಾದರಿಗಳು:**

ಧಾರವಾಡ ತಾಲೂಕಿನ ಬೆನಕನಮಟ್ಟಿಯಲ್ಲಿ ಆದಿಹಳೆಶಿಲಾಯುಗ ಸಂಸ್ಕೃತಿಯ ನೆಲೆ ಇದ್ದು, ಆ ಕಾಲದ ಸಂಸ್ಕೃತಿಯ ಸಲಕರಣೆಗಳಲ್ಲಿ ಅಬಿವಿಲಿಯನ್ ಹಾಗೂ ಅಶ್ಯೂಲಿಯನ್[೬] ಸಂಸ್ಕೃತಿಯ ತಂತ್ರಗಾರಿಕೆಯ ಪ್ರಕಾರಗಳಿಗೆ ಸಂಬಂಧಿಸಿವೆ. ಆದಿಹಳೆಶಿಲಾಯುಗದ ಮಾನವನು ಶಿಲಾಯುಧಗಳನ್ನು ಬಳಸುತ್ತಿದ್ದ. ಕಾಲಾಂತರದಲ್ಲಿ ಆಯುಧಗಳನ್ನು ಉಜ್ಜಿ ನಯ ಮಾಡಿದ ಆಯುಧಗಳನ್ನು ಬಳಸಲು ಪ್ರಾರಂಭಿಸಿದನು. ನವಶಿಲಾಯುಗದ ಮಾನವನು ಅಲೆಮಾರಿ ಜೀವನ ಕೊನೆಯಾಗಿ ಸ್ಥಿರನೆಲೆಯನ್ನು ಕಂಡುಕೊಂಡು ವಾಸದ ಮನೆಗಳನ್ನು ಕಟ್ಟಿಕೊಂಡು ಒಂದೆಡೆ ನೆಲೆಸಿದನು. ಈ ಒಂದು ಸಂದರ್ಭದಲ್ಲಿ ಮಾನವನು

ಕೃಷಿ, ಪಶುಪಾಲನೆ ಆರಂಭಿಸಿದನು.[೭] ಅಮ್ಮಿನಭಾವಿ ಪರಿಸರದ ಬೆನಕನಮಟ್ಟಿಯು ನವಶಿಲಾಯುಗ ಕಾಲದಿಂದಲೂ ಮನುಷ್ಯನ ವಸತಿ ನೆಲೆಯಾಗಿತ್ತು. ಇಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದಂತೆ ಆಯುಧೋಪಕರಣಗಳು ದೊರೆತಿವೆ. ಕಾರಣಾಂತರಗಳಿಂದ ಈ ಊರನ್ನು ಇಂದು ಚಂದನಮಟ್ಟಿಗೆ ಸ್ಥಳಾಂತರಿಸಲಾಗಿದೆ. ಈ ಊರಲ್ಲಿ ಪರ್ವತಮಲ್ಲೇಶ್ವರ ದೇವಾಲಯವಿದ್ದು, ಗುಡ್ಡದ ತುದಿಯಲ್ಲಿ ಕಲ್ಲು ಮತ್ತು ಗಾರೆಗಚ್ಚಿನಿಂದ ನಿರ್ಮಿಸಿದ ಸಣ್ಣ ಕೊಠಡಿಯ ದೇವಾಲಯವಿದೆ. ದೇವಾಲಯದ ಮುಂಭಾಗದಲ್ಲಿ ನಯಮಾಡಿದ ಆರು ಶಿಲಾಕೊಡಲಿಗಳು ಇದ್ದವೆಂದು ಧಾರವಾಡ ಜಿಲ್ಲೆ ದೇವಾಲಯ ಕೋಶದಲ್ಲಿ ಸಿ. ಮಹದೇವ ಅವರು ಪ್ರಕಟಿಸಿದ್ದಾರೆ. ಆದರೆ ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಲಿಂಗದ ಮುಂದೆ ಮೂರು ಶಿಲಾಕೊಡಲಿಗಳು ಮಾತ್ರ ಕಂಡುಬಂದಿವೆ. ಇದೇ ಸ್ಥಳದಲ್ಲಿ ಹುಟ್ಟು ಬಂಡೆಯ ಮೇಲೆ ಮನುಷ್ಯನ ಹೆಜ್ಜೆಗಳನ್ನು ಹೋಲುವ ಗುರುತುಗಳಿವೆ. ಅವು ಮಲ್ಲಯ್ಯನ ಹೆಜ್ಜೆಗಳೆಂದು ಸ್ಥಳಿಯರ ನಂಬಿಕೆಯಾಗಿದೆ. ಈ ಊರಿನ ಗುಡ್ಡದ ನೆತ್ತಿಯ ಇಳಿಜಾರಿನಲ್ಲಿ ಗವಿ ಇದ್ದು, ಇದಕ್ಕೆ ಸ್ಥಳೀಯರು ಹುಲಿಗವಿ ಎಂದು ಕರೆಯುತ್ತಾರೆ. ಗುಡ್ಡದ ಪಕ್ಕದಲ್ಲಿ ನಶಿಸಿಹೋಗಿರುವ ಕೆರೆಯ ಅವಶೇಷಗಳಿವೆ. ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಅವಲೋಕಿಸಿದಾಗ ಚಂದನಮಟ್ಟಿಯು ನವಶಿಲಾಯುಗ ಕಾಲದ ಪ್ರಮುಖ ನೆಲೆಯಾಗಿತ್ತೆಂದು ಹೇಳಬಹುದಾಗಿದೆ.

**ಇತಿಹಾಸದ ಆರಂಭಕಾಲ:**

ಅಮ್ಮಿನಭಾವಿ ಪರಿಸರವು ತನ್ನದೆ ಆದಂತಹ ಇತಿಹಾಸವನ್ನು ಒಳಗೊಂಡಿದೆ. ಇಲ್ಲಿ ಮಾಡಿದಂತಹ ಉತ್ಖನನ, ಸಿಕ್ಕಂತಹ ನೆಲೆಗಳು, ಶಾಸನಗಳು ಮುಂತಾದ ಅಂಶಗಳು ಆಧಾರವಾಗಿ ಕಂಡುಬರುತ್ತದೆ. ಕರ್ನಾಟಕದ ದಕ್ಷಿಣ ತುದಿಯವರೆಗೆ ಮೌರ್ಯ ಸಾಮ್ರಾಜ್ಯವು ಪ್ರಾಬಲ್ಯ ಸ್ಥಾಪಿಸಿದ ಬಗ್ಗೆ ದೊರೆತಿರುವ ಶಿಲಾಶಾಸನಗಳು ಹಾಗೂ ವಸ್ತು ಅವಶೇಷಗಳಿಂದ ಧೃಡಪಟ್ಟಿದೆ. ಅನಂತರದ ಕಾಲಮಾನವ ಬಗ್ಗೆ ನಾಣ್ಯಗಳು ಶಿಲ್ಪಗಳು ವಾಸ್ತು ಶೈಲಿ ಹಾಗೂ ಶಾಸನಗಳು ಪುರಾವೆಗಳಾಗಿವೆ. ಶಾತವಾಹನರ ಮತ್ತು ಅವರ ನಂತರದ ಚುಟು ದೊರೆಗಳು ಆಳ್ವಿಕೆಯನ್ನು ಮಾಡಿದರು.

**ಸ್ಥಳನಾಮ:**

ಹೆಸರುಗಳು ಒಂದು ಜನಾಂಗದ ಸಂಸ್ಕೃತಿಯ ಬೇರುಗಳು. ಸಾಂಸ್ಕೃತಿಕ ಪರಂಪರೆಯ ಪುನರಚನೆಗೆ ಈ ಸ್ಥಳನಾಮಗಳು ಮುಖ್ಯ ಆಕರಗಳಾಗಿವೆ. ಈ ಹಿನ್ನೆಲೆಯಲ್ಲಿ ಅಮ್ಮಿನಭಾವಿಯ ಪ್ರಾಚೀನತೆ ಹಾಗೂ ಪರಂಪರೆಯ ಇತಿಹಾಸ ಅರಿಯುವುದು ಅಷ್ಟೇ

ಮುಖ್ಯವಾಗಿದೆ. ಅಮ್ಮಿನಭಾವಿ ಎಂಬ ನಾಮವು 'ಅಮ್ಮಿನವರ' ಬಾವಿ ಊರ ಹೊರಗೆ ಇರುವುದರಿಂದ ಅಮ್ಮಿನಭಾವಿ ಎಂದು ಹೆಸರು ಬಂದಿದೆ ಎಂಬುದು ಸ್ಥಳೀಯರ ಪ್ರತೀತಿ. ಕ್ರಿ.ಶ. ೧೦ನೆಯ ಶತಮಾನದಲ್ಲಿ ಚಾಲುಕ್ಯರ ಅಧಿಪತ್ಯಕ್ಕೆ ಒಳಪಟ್ಟ ಈ ಪ್ರದೇಶವು ಪಾಳೆಗಾರರ ವಂಶದ ಒಂದು ಸಮೂಹವು ಸ್ಥಳವನ್ನು ಅರಸುತ್ತಾ ಈ ಗ್ರಾಮಕ್ಕೆ ಬಂದು ನೆಲೆಸಿತು. ಜೈನ ಮತಾವಲಂಬಿಗಳಾಗಿದ್ದ ಇವರನ್ನು ಅಮ್ಮಿನಭಾವಿಯ ದೇಸಾಯಿಯರೆಂದು ಕರೆಯುತ್ತಾರೆ. ಈ ವಂಶದವರು ಬಸದಿ ಹಾಗೂ ಬಾವಿಯನ್ನು ಕಟ್ಟಿಸಿದರು. ಆ ಬಾವಿಗೆ 'ಅಮ್ಮನವರ ಬಾವಿ' ಎಂದು ಕರೆಯುತ್ತಿದ್ದರು, ಇದೇ ಮುಂದೆ ಅಮ್ಮಿನಭಾವಿ ಎಂದು ಪರಿವರ್ತನೆಗೊಂಡಿತು. ಮತ್ತೊಂದು ಐತಿಹ್ಯದ ಪ್ರಕಾರ ಊರ ಹೊರಗಿರುವ ಈ ಬಾವಿಯನ್ನು ಏಳು ಗರಾಣಿಬಾವಿ ಎಂದು ಕರೆಯುತ್ತಿದ್ದು, ಬಾವಿಯ ಸುತ್ತಲೂ ೭ ಗಡಗಡೆಗಳಿವೆ. ಇದನ್ನು 'ಅಮೀನ' ಎಂಬುವವನು ಕಟ್ಟಿಸಿದನಂತಲೂ, ಆದಕಾರಣ ಇದಕ್ಕೆ ಅಮ್ಮಿನಭಾವಿ ಎಂದು ಹೆಸರು ಬಂದಿತ್ತೆಂದು ವಿಭಿನ್ನ ಅಭಿಪ್ರಾಯಗಳಿವೆ.

ಅಮ್ಮಿನಭಾವಿ ಪ್ರಮುಖ ಜೈನಕೇಂದ್ರ, ಹಾಗೆಯೇ ಶಾಸನಗಳಿಂದ ಅಗ್ರಹಾರವೆಂದು ಎನಿಸಿಕೊಂಡಿದೆ. ಎನಿಸಿಕೊಂಡಿದೆ. ಇಲ್ಲಿಯ ಬಸದಿಗೆ ಚಾಲುಕ್ಯ ಅರಸರ ನೆರವು ಇದ್ದದ್ದು ತಿಳಿದು ಬರುತ್ತದೆ. ಇವರು ೨೪ ತೀರ್ಥಂಕರರ ಪ್ರಭಾವಳಿಯುಳ್ಳ ಮೂರ್ತಿಯನ್ನು ಸ್ಥಾಪಿಸಿದರು. ಮಲ್ಲಕಾಫರನ ದಾಳಿಯಿಂದ ಈ ಮೂರ್ತಿಗೆ ಧಕ್ಕೆಯಾಗಬಾರದೆಂದು ಭೂಮಿಯಲ್ಲಿ ಹುಗಿದಿಡಲಾಯಿತು. ಇಲ್ಲಿ ಭಗವಾನ್ ಪಾರ್ಶ್ವನಾಥ ಮತ್ತು ಭಗವಾನ್ ಮಹಾವೀರ ತೀರ್ಥಂಕರರ ಮೂರ್ತಿಗಳನ್ನು ಸ್ಥಾಪಿಸಿ ಧಾರ್ಮಿಕ ಕಾರ್ಯಗಳು ಸುಗಮವಾಗಿ ಸಾಗುವಂತೆ ವ್ಯವಸ್ಥೆಮಾಡಿದರು.

ಇತ್ತೀಚೆಗೆ ಬಲ್ಲಾಳರಾವ ದೇಸಾಯಿ ಇವರು ಜಯಪುರದಿಂದ ನೇಮಿನಾಥ ತೀರ್ಥಂಕರರ ಮೂರ್ತಿಯನ್ನು ತರಿಸಿ ಸ್ಥಾಪಿಸಿದ್ದಾರೆ. ಬಸದಿಯ ಮುಂದಿದ್ದ ಪಾಳುಬಾವಿಯನ್ನು ಮುಚ್ಚಲು ಸುತ್ತಮುತ್ತಲಿನ ಮಣ್ಣನ್ನು ಅಗೆಯುವಾಗ ಸುಂದರವಾದ ೨೪ ತೀರ್ಥಂಕರರ ಪ್ರಭಾವಳಿಯುಳ್ಳ ಮೂರ್ತಿ ದೊರೆಯಿತು, ಈ ವಿಷಯ ತಿಳಿದ ಧಾರವಾಡದ ಕಲೆಕ್ಟರರು ಮುಂಬೈ ಗವರ್ನರ್‌ಗೆ ತಿಳಿಸಿದರು. ಅವರು ಅದನ್ನು ಮುಂಬೈಯಿಂದ ಲಂಡನ್ ಮ್ಯೂಜಿಯಂಗೆ ಕಳಿಸುತ್ತೇವೆ ಎಂದಾಗ, ಸ್ಥಳೀಯರಿಂದ ವಿರೋಧ ವ್ಯಕ್ತವಾಯಿತು. ಗವರ್ನರರು ಭೂಮಿಯಲ್ಲಿ ಸಿಕ್ಕಂತಹ ಆಸ್ತಿಯು ಸರಕಾರಕ್ಕೆ ಸೇರಿದ್ದು ಎಂದಾಗ ಅಲ್ಲಿಯ ಜೈನಮತಿಯರು ಪ್ರಸಿದ್ಧ ಬ್ಯಾರಿಸ್ಟರಾದ ಚಂಪತರಾಯರ ಸಹಾಯ ಯಾಚಿಸಿದರು. ಅವರು ವಿಕ್ಟೋರಿಯಾ ರಾಣಿಯ ಅನುಮತಿ ಪಡೆದುಕೊಂಡು ಆ ಮೂರ್ತಿಯನ್ನು

ಜೈನಧರ್ಮದವರಿಗೆ ದೊರಕಿಸಿಕೊಟ್ಟರು. ಆ ತೀರ್ಥಂಕರ ಮೂರ್ತಿಯನ್ನು ೧೯೩೫ರಲ್ಲಿ ಪುನಃ ಪ್ರತಿಷ್ಠಾಪಿಸಲಾಯಿತು. ಈ ಸುಂದರ ಕೆತ್ತನೆಯ ಮೂರ್ತಿಯನ್ನು ನೋಡಲು ಭಾರತದ ಮೂಲೆ–ಮೂಲೆಯಿಂದ ಜನರು ಇಂದಿಗೂ ಬರುತ್ತಾರೆ. ಈ ಚಾವ್ವೀಸ ತೀರ್ಥಂಕರರ ಮೂರ್ತಿಯಿಂದ ಅಮ್ಮಿನಭಾವಿ ಗ್ರಾಮವು ಪ್ರಸಿದ್ಧಿಗೆ ಬಂದಿದೆ. ಏಪ್ರಿಲ್ ೧೯೯೯ರಲ್ಲಿ ನೂತನವಾಗಿ ಶಿಖರ ಮತ್ತು ಮಾನಸ್ತಂಭ ನಿರ್ಮಾಣ ಮಾಡಿ ಪಂಚಕಲ್ಯಾಣ ಮಹೋತ್ಸವವನ್ನು ಮಾಡಲಾಗಿದೆ.

**ರಾಜಕೀಯ ಇತಿಹಾಸ:**

ಧಾರವಾಡ ಜಿಲ್ಲೆಯು ಇತಿಹಾಸ ಪೂರ್ವ ಕಾಲದಿಂದಲೂ ಮಾನವನ ಸಾಂಸ್ಕೃತಿಕ ಚಟುವಟಿಕೆಗಳ ನೆಲೆಬೀಡಾಗಿದೆ.[೮] ಇದರೊಂದಿಗೆ ರಾಜಕೀಯ ಚರಿತ್ರೆಯು ಅಷ್ಟೇ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಅಮ್ಮಿನಭಾವಿ ಪರಿಸರವನ್ನು ಅನೇಕ ಮಹಾಮಂಡಳೇಶ್ವರರು ಮತ್ತು ಗಾವುಂಡ ಮನೆತನಗಳು ತಮ್ಮ ಅಧಿನಕ್ಕೆ ಒಳಪಡಿಸಿಕೊಂಡು ಆಳ್ವಿಕೆ ನಡೆಸಿದವು. ಅಲ್ಲದೆ ಈ ಒಂದು ಪರಿಸರದಲ್ಲಿ ದೊರೆತ ಪ್ರಾಚ್ಯಾವಶೇಷಗಳು ಶಾಸನಗಳು ಸಾಹಿತ್ಯಿಕ ಆಕರಗಳನ್ನು ಮತ್ತು ಸಂದರ್ಭಾನುಸಾರವಾಗಿ ಇತರೆಡೆಯ ಕುರುಹುಗಳನ್ನು ಪೂರಕವಾಗಿಟ್ಟುಕೊಂಡು ಆ ಮನೆತನಗಳ ರಾಜಕೀಯ ಚರಿತ್ರೆಯನ್ನು ವಿಶ್ಲೇಷಿಸಲಾಗಿದೆ. ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ರಾಜವಂಶಗಳ ಚರಿತ್ರೆಯನ್ನು ಈ ರೀತಿಯಾಗಿ ಚಿತ್ರಿಸಿದೆ.

**ಶಾತವಾಹನರು:**

ಕರ್ನಾಟಕದ ಕೆಲವು ಪ್ರದೇಶಗಳನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದ ಮೌರ್ಯರು ಧಾರವಾಡದ ಪರಿಸರದಲ್ಲಿ ಅವರ ಆಳ್ವಿಕೆಯ ಯಾವುದೇ ಕುರುಹುಗಳು ಕಾಣಸಿಗುವುದಿಲ್ಲ. ಇದರ ನಂತರದ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಶಾತವಾಹನರ ಅವಶೇಷಗಳು ನೆರೆಯ ಬನವಾಸಿ, ವಡಗಾಂವ–ಮಾದವಪುರಗಳಲ್ಲಿ ಕಂಡು ಬರುತ್ತವೆ. ಅಲೆಗ್ಸಾಂಡ್ರಿಯಾದ ಭೂಗೋಲ ತಜ್ಞ ಟಾಲೇಮಿ (ಕ್ರಿ.ಶ. ೧೫೦) ಉಲ್ಲೇಖಿಸಿರುವ ಊರುಗಳಲ್ಲಿ ಧಾರವಾಡ ತಾಲೂಕಿನ ಕೆಲವು ಪ್ರದೇಶಗಳ ಸೇರಿವೆ. ಈ ಅವಧಿಯಲ್ಲಿ ಕರ್ನಾಟಕ ಮತ್ತು ರೋಮ್‌ದೇಶಗಳ ನಡುವೆ ವ್ಯಾಪಾರದ ಸಂಪರ್ಕವಿತ್ತು. ಪ್ರಸ್ತುತ ಗ್ರಾಮದಲ್ಲಿ ಶಾತವಾಹನರ ಯಾವುದೇ ಪ್ರತ್ಯಕ್ಷ ಆಧಾರಗಳು ಸಿಗದೆ ಇದ್ದರೂ, ಈ ಪ್ರದೇಶವು ಶಾತವಾಹನರ ಆಳ್ವಿಕೆಗೆ ಒಳಪಟ್ಟಿತೆಂದು ಹೇಳಬಹುದು.

**ಬನವಾಸಿ ಕದಂಬರು:**

ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಮೊಟ್ಟಮೊದಲ ಪ್ರಖ್ಯಾತ ಅರಸರು ಕದಂಬರು. ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದರು. ಬೆಳಗಾವಿ ಜಿಲ್ಲೆಯ ಹಲಸಿ ಹಾಗೂ ಉತ್ತರ ಕನ್ನಡ ಜಿಲ್ಲೆಯ ಬನವಾಸಿಗಳಲ್ಲಿ ಇವರ ಕಾಲದ ಅವಶೇಷಗಳು ಕಂಡು ಬರುತ್ತವೆ. ಶಾಸನಗಳಲ್ಲಿ ಸುದ್ದಿಕುಂದೂರು ವಿಷಯವು ನರೇಂದ್ರ ಪರಿಸರವಾಗಿದೆ. ಇದು ಹಲಸಿಯನ್ನು ಒಳಗೊಂಡಿಬಹುದೆಂದು ಪಂಚಮುಖಿಯವರ ಅಭಿಪ್ರಾಯ.

ಅನಂತರದ ಕಾಲದಲ್ಲಿ ಈ ಪರಿಸರದಲ್ಲಿ ಆಳ್ವಿಕೆ ನಡೆಸಿದ ಗೋವೆಯ ಕದಂಬರು, ಹಾನಗಲ್ಲ ಕದಂಬರು ತಾವು ಬನವಾಸಿ ಕದಂಬರ ವಂಶಸ್ಥರರೆಂದು ಹೇಳಿಕೊಂಡಿದ್ದಾರೆ. ಧಾರವಾಡ ಪರಿಸರ ಗೋವಾ ಕದಂಬರ ಆಳ್ವಿಕೆಗೆ ಒಳಪಟ್ಟಿತ್ತು. ಅವರು ಹಲಸಿಯಲ್ಲಿ ಬಸದಿ ಹಾಗೂ ದೇವಾಲಯವನ್ನು ಕಟ್ಟಿಸಿ ದಾನ ನೀಡಿದ್ದಾರೆ. ಹೀಗಾಗಿ ಇವರ ಕಾಲದ ಜನವಸತಿ ಈ ಭಾಗದಲ್ಲಿ ಇದ್ದಿರಬೇಕೆಂದು ಊಹಿಸಬಹುದಾಗಿದೆ.

**ಬಾದಾಮಿ ಚಾಲುಕ್ಯರು:**

ಕದಂಬರ ನಂತರ ಕರ್ನಾಟಕವನ್ನು ಆಳಿದ ಅತ್ಯಂತ ಪ್ರಸಿದ್ಧ ರಾಜಮನೆತನ ಚಾಲುಕ್ಯರದು. ಇವರು ಬಾದಾಮಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ದಕ್ಷಿಣ ಭಾರತದ ಬಹುತೇಕ ಭಾಗಗಳನ್ನು ಸುಮಾರು ೨೫೦ ವರ್ಷಗಳ ಕಾಲ ಆಳ್ವಿಕೆ ಮಾಡಿದರು. ಪ್ರಸ್ತುತ ಅಮ್ಮಿನಭಾವಿ ಪರಿಸರದಲ್ಲಿ ಇವರ ಆಳ್ವಿಕೆಯ ಬಗ್ಗೆ ಯಾವುದೇ ಕುರುಹುಗಳು ಕಂಡುಬಂದಿಲ್ಲ.

**ರಾಷ್ಟ್ರಕೂಟರು:**

ಚಾಲುಕ್ಯರ ನಂತರ ಕರ್ನಾಟಕದಲ್ಲಿ ರಾಷ್ಟ್ರಕೂಟರು ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸಿದರು. ಇವರು ಸುಮಾರು ೨೨೦ ವರ್ಷಗಳಷ್ಟು ದೀರ್ಘಕಾಲ ಆಳ್ವಿಕೆ ನಡೆಸಿ ತಮ್ಮ ಪ್ರಭುತ್ವವನ್ನು ಮೆರೆದರು. ಧಾರವಾಡ ಪರಿಸರದಲ್ಲಿ ೧೧ ರಾಷ್ಟ್ರಕೂಟರ ಶಾಸನಗಳಿವೆ. ಇವು ದೇವಾಲಯಗಳ ಸ್ಥಾಪನೆ, ದಾನ ಅಗ್ರಹಾರಗಳ ನಿರ್ಮಾಣ, ಕೆರೆ ಮುಂತಾದವುಗಳ ಬಗ್ಗೆ ಉಲ್ಲೇಖಿಸುತ್ತವೆ. ಅಲ್ಲದೆ ಈ ಮನೆತನದ ಪ್ರಸಿದ್ಧ ಅರಸರಾದ ಅಮೋಘವರ್ಷ, ನಾಲ್ವಡಿ ಗೋವಿಂದ, ಮುಮ್ಮಡಿ ಕೃಷ್ಣ ಮತ್ತು ಖೊಟ್ಟಿಗರ ಬಗ್ಗೆ ಉಲ್ಲೇಖ ಸಿಗುತ್ತದೆ. ಕ್ರಿ.ಶ. ೯೩೭ರ ತಂಬೂರು ಶಾಸನವು, ಕಣ್ಣಹ ಮಹಾರಾಜ ಹಲಸಿಗೆ-೧೨೦೦೦ ಆಳುತ್ತಿದ್ದ ಬಗ್ಗೆ ಉಲ್ಲೇಖಿಸುತ್ತದೆ.

**ಕಲ್ಯಾಣದ ಚಾಲುಕ್ಯರು:**

ಕಲ್ಯಾಣದ ಚಾಲುಕ್ಯರು ರಾಷ್ಟ್ರಕೂಟರ ನಂತರ ಕರ್ನಾಟಕದಲ್ಲಿ ಆಳ್ವಿಕೆಗೆ ಬಂದರು. ಇವರ ಆಳ್ವಿಕೆಯ ಬಗ್ಗೆ ಈ ಪರಿಸರದಲ್ಲಿ ಶಾಸನಗಳು ಪ್ರಮುಖವಾಗಿ ಕಂಡುಬರುತ್ತವೆ. ರಾಷ್ಟ್ರಕೂಟರ ಸಾಮಂತನಾಗಿದ್ದ ಇಮ್ಮಡಿ ತೈಲಪನು ಕ್ರಿ.ಶ. ೯೭೩ರಲ್ಲಿ ಅಸಮರ್ಥ ದೊರೆಯಾಗಿದ್ದ ರಾಷ್ಟ್ರಕೂಟರ ಇಮ್ಮಡಿಕರ್ಕನನ್ನು ಬದಿಗೊತ್ತಿ ಚಾಲುಕ್ಯರ ಅಧಿಪತ್ಯವನ್ನು ಪುನಃ ಸ್ಥಾಪಿಸಿದನು. ಈ ಮನೆತನದಲ್ಲಿ ಮೊದಲನೆಯ ಸೋಮೇಶ್ವರ, ಆರನೆಯ ವಿಕ್ರಮಾಧಿತ್ಯ, ಮೂರನೆಯ ಸೋಮೇಶ್ವರ ಪ್ರಸಿದ್ಧ ಅರಸರಾಗಿದ್ದಾರೆ.

ಆರನೆಯ ವಿಕ್ರಮಾಧಿತ್ಯನು ಕ್ರಿ.ಶ. (೧೦೭೬-೧೧೨೬) ಕಲ್ಯಾಣ ಚಾಲುಕ್ಯರ ಅರಸರಲ್ಲೇ ಪ್ರಸಿದ್ದ ಅರಸನಾಗಿದ್ದ. ಇವನು ತ್ರಿಭುವನಮಲ್ಲ ಪೆರ್ಮಾಡಿದೇವ ಮುಂತಾದ ಬಿರುದುಗಳನ್ನು ಧರಿಸಿದ್ದನು. ಕ್ರಿ.ಶ. ೧೦೭೧ರ ಅವಧಿಯಲ್ಲಿ ಸಾಮ್ರಾಜ್ಯವನ್ನು ಇಮ್ಮಡಿ ಸೋಮೇಶ್ವರನು ಆಳುತ್ತಿದ್ದನು. ಆದರೆ ಅಮ್ಮಿನಭಾವಿಯ ಒಂದು ಶಾಸನವು (ಕ್ರಿ.ಶ. ೧೦೭೧) ವಿಕ್ರಮಾದಿತ್ಯ ಅಳುತ್ತಿದ್ದನೆಂದು ಉಲ್ಲೆಖಿಸುತ್ತದೆ.[೯] ಶಾಸನಗಳ ಪ್ರಕಾರ ಆರನೆಯ ವಿಕ್ರಮಾದಿತ್ಯನು ಕ್ರಿಶ ೧೦೭೬ ರಲ್ಲಿ ರಾಜನಾಗಿ ಸ್ವತಂತ್ರ ಆಳ್ವಿಕೆ ಪ್ರಾರಂಭಿಸಿದರೂ ಈ ಶಾಸನ ಸುಮಾರು ೬-೭ ವರ್ಷಗಳಷ್ಟು ಮೊದಲು ಆತನ ಆಳ್ವಿಕೆಯನ್ನು ಸೂಚಿಸುತ್ತದೆ. ಆದ್ದರಿಂದ ಇದೊಂದು ಮಹತ್ವಪೂರ್ಣ ಶಾಸನವಾಗಿದೆ. ಅಲ್ಲದೆ ವಿಕ್ರಮಾದಿತ್ಯನ ಆಳ್ವಿಕೆಯ ಪ್ರಪ್ರಥಮ ಶಾಸನವಾಗಿದೆ. ಕನಕೂರಿನ ಕ್ರಿ.ಶ. ೧೧೦೪[೧೦]ರ ಶಾಸನವು ಕನಕಾಪುರದ ಊರೊಡೆಯ ವಾಮನಬಟ್ಟೋಪಾಧ್ಯಾಯಗೆ ದತ್ತಿ ನೀಡಿದ ಬಗ್ಗೆ ಉಲ್ಲೇಖಿಸುತ್ತದೆ. ನರೇಂದ್ರ ಕ್ರಿ.ಶ.೧೧೨೩[೧೧]ರ ಶಾಸನ ಈತನ ಆಳ್ವಿಕೆಯ ಕಾಲವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೨೫[೧೨]ರಲ್ಲಿ ವಿಕ್ರಮಾದಿತ್ಯನ ಮಗಳು ಮೈಳಲದೇವಿಯ ಮನೆವೆರ್ಗಡೆಯಾಗಿದ್ದ ಸಿಂಗರಸ ಕುಂದೂರು ಗ್ರಾಮದಲ್ಲಿ ದೇವಾಲಯ ನಿರ್ಮಿಸಿ ಅಲ್ಲಿಯ ಲಕ್ಷ್ಮಣೇಶ್ವರ ದೇವರಿಗೆ ದತ್ತಿ ನೀಡಿದ ಬಗ್ಗೆ ತಿಳಿಸುತ್ತದೆ.

ಆರನೆಯ ವಿಕ್ರಮಾದಿತ್ಯನಿಗೆ ಮಲ್ಲಿಕಾರ್ಜುನ, ಜಯಕರ್ಣ ಮತ್ತು ಮುಮ್ಮಡಿ ಸೋಮೇಶ್ವರ ಎಂಬ ಮೂವರು ಮಕ್ಕಳು. ಇವರುಗಳಲ್ಲಿ ವಿಕ್ರಮಾದಿತ್ಯನ ನಂತರ ಮುಮ್ಮಡಿ ಸೋಮೇಶ್ವರ ಅಧಿಕಾರಕ್ಕೆ ಬಂದನು. ಭೂಲೋಕಮಲ್ಲ ಎಂಬುದು ಈತನ ಬಿರುದಾಗಿದೆ. ಇವನು ತನ್ನ ಶಾಸನಗಳಲ್ಲಿ ಭೂಲೋಕಮಲ್ಲ ವರ್ಷವೆಂದು ಬರೆಯಿಸಿಕೊಂಡಿದ್ದಾನೆ. ಇದು ಅವನ ಬಿರುದಾಗಿತ್ತು. ಮುಮ್ಮಡಿ ಸೋಮೇಶ್ವರನ ನಂತರ ಎರಡನೆಯ ಜಗದೇಕಮಲ್ಲನು

ಅಧಿಕಾರಕ್ಕೆ ಬಂದರು, ಅಮ್ಮಿನಭಾವಿಯ ಕ್ರಿ.ಶ.೧೧೪೬[೧೩]ರ ಶಾಸನ ಜಗದೇಕಮಲ್ಲನ ಪಟ್ಟಸಾಹಸಿ ಸೇನಾಪತಿ ಬರ್ಮಣಯ್ಯನ ಬಗ್ಗೆ ಉಲ್ಲೇಖಿಸುತ್ತದೆ.

**ಕಲಚೂರಿಗಳು:**

ಬಿಜ್ಜಳನು ಕಲ್ಯಾಣದ ಚಾಲುಕ್ಯ ಇಮ್ಮಡಿ ತೈಲಪನಿಂದ ಸೌರ್ವಭೌಮತ್ವವನ್ನು ಕಿತ್ತುಕೊಂಡನು. ಅಮ್ಮಿನಭಾವಿ ಪ್ರದೇಶದಲ್ಲಿ ಕಲಚೂರಿಗಳ ಆಳ್ವಿಕೆಯ ಪ್ರತ್ಯಕ್ಷ ಆಧಾರ ಕಂಡುಬರದಿದ್ದರೂ ಅವರ ಸಾಮ್ರಾಜ್ಯದ ಭಾಗವಾಗಿತ್ತು. ಈ ಮೊದಲು ಬಿಜ್ಜಳನು ಚಾಲುಕ್ಯ ಎರಡನೆಯ ಜಗದೇಕಮಲ್ಲನ ಆಳ್ವಿಕೆಯ ಅವಧಿಯಲ್ಲಿಯೇ ಸಾಮಂತನಾಗಿದ್ದನು. ಅಲ್ಲದೇ ಮುಮ್ಮಡಿ ತೈಲಪನ ಆಳ್ವಿಕೆಯ ಕಾಲದಲ್ಲೂ ಸೇವೆ ಸಲ್ಲಿಸಿದ್ದನು. ಈ ಅವಧಿಯಲ್ಲಿ ಬಿಜ್ಜಳನಿಗೆ ತ್ರಿಭುವನಮಲ್ಲ ನಿಶ್ಯಂಕಮಲ್ಲ ಎಂಬ ಬಿರುದಾವಳಿಗಳಿದ್ದವು. ಬಿಜ್ಜಳನ ಮಂತ್ರಿ ಬಸವಣ್ಣನ ಸೋದರ ಅಳಿಯ ಚನ್ನಬಸವಣ್ಣ ಹಾಗೂ ಸೋದರಿಯಾದ ಅಕ್ಕನಾಗಮ್ಮರು ಬೆಳಗಾವಿಯಿಂದ ಉಳವಿಗೆ ಹೋಗುವಾಗ ಧಾರವಾಡ, ಹುಬ್ಬಳ್ಳಿ, ಅದರಗೊಂಚಿ ಮಾರ್ಗವಾಗಿ ಉತ್ತರ ಕನ್ನಡ ಜಿಲ್ಲೆಯ ಉಳವಿಗೆ ಸಾಗಿದರೆಂಬುದು ಪ್ರತೀತಿ ಇದೆ.

**ದೇವಗಿರಿಯ ಯಾದವರು:**

ಕಲ್ಯಾಣದ ಚಾಲುಕ್ಯರ ಪತನದ ನಂತರ ಯಾದವರು ಪ್ರಾಬಲ್ಯಕ್ಕೆ ಬಂದರು. ಇವರು ಪ್ರಾರಂಭದಲ್ಲಿ ಮಾನ್ಯಖೇಟದ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರ ಸಾಮಂತರಾಗಿ ಸುಮಾರು ಮುನ್ನೂರು ವರ್ಷಗಳ ಕಾಲ ಮುಂಬೈ, ನಾಸಿಕ, ಅಹಮದನಗರ ಜಿಲ್ಲೆಗಳನ್ನೊಳಗೊಂಡ ಪ್ರದೇಶಗಳಲ್ಲಿ ಆಳುತ್ತಿದ್ದರು. ಇವರು ಮೊದಲು ತಮ್ಮ ರಾಜಧಾನಿಯಾಗಿ ನಂದಿನೇರಿ ನಂತರ ದೇವಗಿರಿಯನ್ನು ಪ್ರಧಾನವಾಗಿ ಮಾಡಿಕೊಂಡರು. ಈ ವಂಶದ ಮಾದಲ ಸ್ವತಂತ್ರ ದೊರೆ ಐದನೆಯ ಭಿಲ್ಲಮ. ಚಾಲುಕ್ಯರ ನಾಲ್ಕನೆಯ ಸೋಮೇಶ್ವರನು ಕಲಚೂರಿಗಳನ್ನು ಸೋಲಿಸಿ ತನ್ನ ರಾಜ್ಯವನ್ನು ಪುನಃ ಪಡೆಯುವಲ್ಲಿ ಯಶಸ್ವಿಯಾದರೂ, ಅದನ್ನು ಬಲಪಡಿಸುವಲ್ಲಿ ವಿಫಲನಾದನು. ಭಿಲ್ಲಮನು ಕಲ್ಯಾಣವನ್ನು ಗೆದ್ದು ತುಂಗಭದ್ರದತ್ತ ಸಾಗುತ್ತಿದ್ದಾಗ ಮಾರ್ಗಮಧ್ಯದಲ್ಲಿ ಹೊಯ್ಸಳರ ವೀರ ಬಲ್ಲಾಳನೊಂದಿಗೆ ನಡೆದ ಸೊರಟೂರು ಕಾಳಗದಲ್ಲಿ ಸೋಲನ್ನು ಅನುಭವಿಸಿದನು. ಈ ಅವಧಿಯಲ್ಲಿ ತನ್ನ ರಾಜಧಾನಿಯನ್ನು ನಂದಿನೇರ, ದೇವಗಿರಿಗೆ ವರ್ಗಾಯಿಸಿದನು.

ಭಿಲ್ಲಮನ ನಂತರ ಜೈತುಗಿ ಅರಸನಾದನು. ಇವನ ನಂತರ ಮಗನಾದ ಸಿಂಘಣನು ಯಾದವ ವಂಶದ ಚುಕ್ಕಾಣಿ ಹಿಡಿದನು. ಇವನು ಈ ವಂಶದ ಶ್ರೇಷ್ಠ ದೊರೆಯೆಂದು ಪರಿಗಣಿಸಲಾಗಿದೆ. ಈತ ದಕ್ಷಿಣದಲ್ಲಿ ಗೊವೆಯ ಕದಂಬರನ್ನು ಹಾಗೂ ಹಾನಗಲ್ಲ

ಕದಂಬರನ್ನು ಸೋಲಿಸಿ, ಕ್ರಿ.ಶ. ೧೨೧೩ರಲ್ಲಿ ಲಕ್ಕುಂಡಿಯನ್ನು ಹೊಯ್ಸಳರಿಂದ ಕಿತ್ತುಕೊಂಡನು. ಈ ಅವಧಿಯಲ್ಲಿ ಬೆಳ್ವೊಲ, ಪುಲಿಗೇರಿ, ಮಾಸವಾಡಿ, ಹಾನಗಲ್ಲು, ಗುತ್ತರು, ನಾಗರಖಂಡ, ಸಾಂತಳಿಗೆಗಳು ಇವನ ಆಡಳಿತಕ್ಕೆ ಒಳಪಟ್ಟಿದ್ದವು. ಇತನು ತನ್ನ ಆಳ್ವಿಕೆಯ ಅವಧಿಯಲ್ಲಿ ಅಂದರೆ ಕ್ರಿ.ಶ. ೧೨೧೭ರಲ್ಲಿ ತೆಲ್ಲಿಗ ಐವತ್ತೊಕ್ಕಲು ಗುಡಿಗೇರಿಯ ಕಾಳೇಶ್ವರ ದೇವಾಲಯಗಳಿಗೆ ದೇವರ ನಂದಾದೀವಿಗೆಗೆ ಎಣ್ಣೆಯನ್ನು ಧಾನವಾಗಿ ನೀಡಿದ್ದಾನೆ. ಕ್ರಿ.ಶ ೧೨೨೮ರಲ್ಲಿ ರುದ್ರಯ್ಯ ಚಂದ್ರಯ್ಯರು ಅಣ್ಣಿಗೇರಿಯ ಅಮೃತೇಶ್ವರ ದೇವಾಲಯದಲ್ಲಿ ಧರ್ಮೆಶ್ವರ ದೇವಾಲಯವನ್ನು ನಿರ್ಮಿಸಿದ್ದಾರೆ. ಕ್ರಿ.ಶ. ೧೨೪೪ರಲ್ಲಿ[೧೪] ಹೆಬ್ಬಳ್ಳಿಯ ದೇವಾಲಯಕ್ಕೆ ಸುಂಕವಿನಾಯತಿಯನ್ನು ನೀಡಿದ್ದಾನೆ. ಸಿಂಘಣನ ನಂತರ ಅವನ ಮೊಮ್ಮಗನಾದ ಕೃಷ್ಣ ಅಥವಾ ಕನ್ನರದೇವನು (ಕ್ರಿ.ಶ ೧೨೪೭–೧೨೬೧) ಅಧಿಕಾರಕ್ಕೆ ಬಂದನು. ಇವನು ಬೆಳಗುತ್ತಿಯ ಸಿಂಧರನ್ನು ಸೋಲಿಸಿ ಹೊಯ್ಸಳರ ಸೋಮೇಶ್ವರ ವಿರುದ್ಧ ಹೋರಾಡಿ ಚಿತ್ರದುರ್ಗದವರೆಗೂ ಸಾಗಿದನು. ಈತನ ಆಳ್ವಿಕೆಗೆ ಸಂಬಂಧಿಸಿದಂತೆ ಮಹಾಪ್ರಧಾನ ಬೀಚ್ಚಿಸೆಟ್ಟಿದೇವ ಕ್ರಿ.ಶ.೧೨೪೮ರಲ್ಲಿ ಹುಬ್ಬಳ್ಳಿಯ ಬ್ರಾಹ್ಮಣರಿಗೆ ಮತ್ತು ಹೆಬ್ಬಳ್ಳಿಯ ಬ್ರಾಹ್ಮಣರಿಗೆ[೧೫] ದತ್ತಿ ನೀಡಿದ್ದಾನೆ.

ಕನ್ನರದೇವನ ನಂತರ ಅವನ ತಮ್ಮನಾದ ಮಹಾದೇವನು ಅಧಿಕಾರಕ್ಕೆ ಬಂದನು. ಇವನು ಆಳ್ವಿಕೆಗೆ ಸಂಬಂಧಿಸಿದಂತೆ (ಕ್ರಿ.ಶ.೧೨೬೧–೧೨೭೧) ಕ್ರಿ.ಶ. ೧೨೬೪ರಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ಅಂಗರಂಗ ಬೋಗಗಳಿಗೆ ಪಲಿಸಿಗೆ ನಾಡಿನ ಕುಂದೂರು ವಿಷಯದ ಕೊಟಬಾಗಿ ಗ್ರಾಮವನ್ನು ದತ್ತಿ ನೀಡಲಾಗಿದೆ. ಈ ಕಾಲದ ಒಂದು ಶಾಸನ ಛಬ್ಬಿಯಲ್ಲಿದೆ. ಇವನ ನಂತರ ಕನ್ನರದೇವನ ಮಗ ರಾಮಚಂದ್ರದೇವನು ಅಧಿಕಾರಕ್ಕೆ ಬಂದನು. ಇವನು ಕ್ರಿ.ಶ.೧೨೮೨ ರಲ್ಲಿ ತನ್ನ ತಾಯಿಯ ಇಚ್ಚೆಯಂತೆ ತಡಕೋಡದಲ್ಲಿ ಒಂದು ಬಸದಿಯನ್ನು ನಿರ್ಮಿಸಿದನು. ಯಾದವರಿಗೆ ಸಂಬಂಧಿಸಿದಂತೆ ಈ ಪ್ರದೇಶದಲ್ಲಿ ಇವರ ಆಳ್ವಿಕೆಯನ್ನು ದೃಢೀಕರಿಸಲು ಧಾರವಾಡ, ಕುಂದಗೊಳ, ನವಲಗುಂದ ಮತ್ತು ಹುಬ್ಬಳ್ಳಿ ತಾಲೂಕುಗಳಲ್ಲಿ ಶಾಸನಗಳು ಸಿಕ್ಕಿವೆ.

**ಹೊಯ್ಸಳರು:**

ಕರ್ನಾಟಕದ ಇತಿಹಾಸದಲ್ಲಿ ಹೊಯ್ಸಳರು ಆಡಳಿತದಲ್ಲಿ ಒಂದು ಹೊಸ ಯುಗವೇ ಪ್ರಾರಂಭಿಸಿದರು. ಇವರು ಆರಂಭದಲ್ಲಿ ಕಲ್ಯಾಣದ ಚಾಲುಕ್ಯರ ಮಾಂಡಲೀಕರಾಗಿದ್ದು, ನಂತರ ಸ್ವತಂತ್ರರಾಗಿ ಆಳ್ವಿಕೆ ಪ್ರಾರಂಭಿಸಿದರು. ಧಾರವಾಡ ಪರಿಸರದಲ್ಲಿ ಹೊಯ್ಸಳರ ಆಳ್ವಿಕೆಯು ವೀರಬಲ್ಲಾಳನಿಂದ (ಕ್ರಿ.ಶ. ೧೧೭೩–೧೨೨೦) ಆರಂಭವಾಗಿದ್ದು ಕಂಡುಬರುತ್ತವೆ.

ಇವನು ತನ್ನ ಆಳ್ವಿಕೆಯ ಅವಧಿಯಲ್ಲಿ ಧಾರವಾಡ ಪರಿಸರದಲ್ಲಿ ಪ್ರಭಾವಿ ವ್ಯಕ್ತಿಯಾಗಿದ್ದನು. ಇವನಿಗೆ ಸಂಬಂಧಿಸಿದ ಸುಮಾರು ೭ ಶಾಸನಗಳು ದೊರೆತಿವೆ.

**ವಿಜಯನಗರದ ಅರಸರು:**

ವಿಜಯನಗರದ ಆರಂಭದ ಕಾಲದಲ್ಲಿ ಧಾರವಾಡ ಜಿಲ್ಲೆಯು ಸಾಮ್ರಾಜ್ಯದ ಒಂದು ಭಾಗವಾಗಿತ್ತು. ಈ ಸಾಮ್ರಾಜ್ಯವನ್ನು ಹರಿಹರ ಮತ್ತು ಬುಕ್ಕರು ಸ್ಥಾಪಿಸಿದರು. ಇವರು ಮೊದಲು ಹೊಯ್ಸಳರ ಮಾಂಡಲೀಕರಾಗಿದ್ದು, ನಂತರ ಸ್ವತಂತ್ರರಾಗಿ ರಾಜ್ಯಭಾರ ಪ್ರಾರಂಭಿಸಿದರು. ವಿಜಯನಗರ ಸಾಮ್ರಾಜ್ಯವನ್ನು ಸಂಗಮ, ಸಾಳ್ವ, ತುಳು, ಮತ್ತು ಅರವೀಡು ಎಂಬ ನಾಲ್ಕು ಪ್ರಮುಖ ಮನೆತನಗಳು ಆಳಿದವು. ಸಂಗಮ ವಂಶದಲ್ಲಿ ಪ್ರೌಢದೇವರಾಯ ಅಥವಾ ಇಮ್ಮಡಿ ದೇವಾರಾಯನ ಆಳ್ವಿಕೆ ಪ್ರಮುಖವಾದುದು. ಇವನ ಆಳ್ವಿಕೆಯ ಕಾಲದ ಕೆಲವು ಶಾಸನಗಳು ಈ ಪ್ರದೇಶದಲ್ಲಿ ದೊರೆತಿವೆ. ಕ್ರಿ.ಶ. ೧೪೪೮ರಲ್ಲಿ[೧೬] ದೇವರಾಯನ ಮಗ ಮಲ್ಲಿಕಾರ್ಜುನ ಮಹಾರಾಯನ ಸಿಂಹಾಸನಾರೋಹಣದ ನೆನಪಿಗಾಗಿ ಧಾರವಾಡದಲ್ಲಿ ನಂದಿಸ್ತಂಭವನ್ನು ಪ್ರತಿಷ್ಠಾಪಿಸಿ ನರೇಂದ್ರಪುರ, ಕಂಭಾಲಪುರ, ಬಮ್ಮರಸಿ, ಕೊಪ್ಪಗಳನ್ನು ದೇವರಿಗೆ ದತ್ತಿಯಾಗಿ ನೀಡಿದ ಬಗ್ಗೆ ಉಲ್ಲೇಖವಿದೆ.

ವಿಜಯನಗರವನ್ನು ಆಳಿದ ವಂಶಗಳಲ್ಲಿ ತುಳುವಂಶವು ಎಲ್ಲ ದಿಕ್ಕುಗಳಲ್ಲಿ ಪ್ರಸಿದ್ಧಿ ಪಡೆಯಿತು. ಈ ವಂಶದ ಕೃಷ್ಣದೇವರಾಯನು ಸಮರ್ಥ ಮತ್ತು ಪ್ರಖ್ಯಾತ ದೊರೆಯಾಗಿದ್ದನು. ನಂತರ ಇವನ ಸಹೋದರನಾದ ಅಚ್ಚುತರಾಯನು ಪಟ್ಟಕ್ಕೆ ಬಂದನು. ಅಚ್ಚುತರಾಯನ ನಂತರ ಇವನ ಸಹೋದರನ ಮಗನಾದ ಸದಾಶಿವರಾಯನು ಅಧಿಕಾರದ ಗದ್ದುಗೆಯನ್ನು ಏರಿದನು. ಇವನು ನಾಮಮಾತ್ರ ಅರಸನಾಗಿದ್ದು, ಆಡಳಿತದ ಚುಕ್ಕಾಣಿಯು ಅಳಿಯ ರಾಮರಾಯನ ಅಧೀನದಲ್ಲಿತ್ತು. ಈ ಅವಧಿಯ್ಲಲಿ ಜಿಲ್ಲೆಯ ಗುಡಿಸಾಗರ ಅಮ್ಮಿನಭಾವಿ[೧೭] ದೇವರ ಹುಬ್ಬಳ್ಳಿ ಬೆಳವಟಿಗೆಯು ಕ್ರಿ.ಶ. ೧೫೪೭ರ ಶಾಸನಗಳು ನಾವಿಂದರ ತೆರಿಗೆ ಅಂದರೆ ಕ್ಷೌರಿಕರಿಗೆ ತೆರಿಗೆ ವಿನಾಯತಿ ನೀಡಿದ ಬಗ್ಗೆ ಶಾಸನಗಳು ತಿಳಿಸುತ್ತವೆ. ವಿಜಯನಗರದ ಅರಸರಿಗೂಕ ಶಾಹಿಸುಲ್ತಾನರಿಗೂ ಕ್ರಿ.ಶ. ೧೫೬೫ರಲ್ಲಿ ರಕ್ಕಸಗಿತಂಗಡಗಿಯಲ್ಲಿ ಯುದ್ದ ಸಂಭವಿಸಿತು. ವಿಜಯನಗರ ಅರಸರು ಪರಾಭಗೊಂಡರು. ಈ ಯುದ್ದದ ನಂತರ ಧಾರವಾಡ ಜಿಲ್ಲೆಯ ಆದಿಲ್‌ಷಾಹಿಗಳ ಅಧಿಕಾರಕ್ಕೆ ಒಳಪಟ್ಟಿತು.[೧೮]

**ಬಹುಮನಿ ಸುಲ್ತಾನರು:**

ಕರ್ನಾಟಕದಲ್ಲಿ ಮುಸ್ಲಿಮರ ಆಳ್ವಿಕೆ ಕ್ರಿ.ಶ. ೧೩ನೇ ಶತಮಾನದ ವೇಳೆಗೆ ಪ್ರಬಲವಾಗಿ ಬೇರೂರಿತು. ಬಹುಮನಿ ಸಾಮ್ರಾಜ್ಯವು ಕ್ರಿ.ಶ. ೧೩೪೭ರಲ್ಲಿ ಸ್ಥಾಪನೆಯಾಯಿತು.

ವಿಜಯನಗರದ ಅರಸರಿಗೂ ಬಹುಮನಿ ಸುಲ್ತಾನರಿಗೂ ಸತತ ಯುದ್ಧಗಳೂ ನಡೆದವು. ಕ್ರಿ.ಶ. ೧೪೦೬ರಲ್ಲಿ ಸುಲ್ತಾನ ಫಿರೋಜನು ಬಂಕಾಪುರವನ್ನು ವಿಜಯನಗರ ಅರಸರಿಂದ ಗೆದ್ದಬಗ್ಗೆ ಲಿಖಿತ ಆಧಾರಗಳು ದೊರೆಯದಿದ್ದರೂ, ಬಂಕಾಪುರದಲ್ಲಿ ವಿಜಯನಗರ ಅರಸರ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿಲ್ಲವಾದ್ದರಿಂದ ಪ್ರಾಯಶ: ಇದು ಬಹುಮನಿ ಸುಲ್ತಾನರ ವಂಶದಲ್ಲಿದ್ದರಬಹುದೆಂದು ಹೇಳಬಹುದಾಗಿದೆ. ಬಹುಮನಿ ಸುಲ್ತಾನರ ಸೈನ್ಯಾಧಿಕಾರಿ ಮಹಮ್ಮದ್ ಗವಾನನು ನೆರೆಯ ಬೆಳಗಾವಿಯನ್ನು ಗೆದ್ದರೂ ಧಾರವಾಡ ಜಿಲ್ಲೆಯು ಅವನ ಆಳ್ವಿಕೆಗೆ ಒಳಪಟ್ಟಂತೆ ಕಾಣುವುದಿಲ್ಲ.

**ಬಿಜಾಪುರದ ಆದಿಲ್‌ಷಾಹಿಗಳು:**

ವಿಜಯನಗರ ಸಾಮ್ರಾಜ್ಯದ ಪತನದ ನಂತರ ಐದು ಶಾಹಿವಂಶಗಳಲ್ಲಿ ಒಂದಾದ ಬಿಜಾಪುರದ ಆದಿಲ್‌ಷಾಹಿಗಳು ಕ್ರಿ.ಶ. ೧೫೭೩ರಲ್ಲಿ ಧಾರವಾಡ ಜಿಲ್ಲೆಯನ್ನು ಸಂಪೂರ್ಣವಾಗಿ ಆಕ್ರಮಿಸಿಕೊಂಡರು. ಆಗ ಈ ಪ್ರದೇಶಕ್ಕೆ ನಸರತಾಭಾದ ಎಂದು ಹೆಸರಟ್ಟಿರು. ಧಾರವಾಡ ಪಟ್ಟಣವನ್ನು ಶಿವರಖಾನ ಕ್ರಿ.ಶ. ೧೫೬೭ರಲ್ಲಿ ಕಟ್ಟಿದ ಎಂದು ಜುಬೇರಿ ಹೇಳಿದ್ದಾನೆ. ಧಾರವಾಡದ ಹೊರಭಾಗದಲ್ಲಿ ಕಂಡುಬರುವ ಮಣ್ಣು ಕೋಟೆ (ಮಣಕಿಲ್ಲ) ಕಟ್ಟಿರಬೇಕು, ಅವರು ತೋರಗಲ್ ಧಾರವಾಡ ಕೋಟೆಗಳನ್ನು ಗೆದ್ದುಕೊಂಡಾಗ, ಇಲ್ಲಿಯ ಅಮ್ಮಿನಭಾವಿ ದೇಸಾಯಿಗಳು ವಿಜಾಪುರದ ಮಾಂಡಳಿಕರಾದರು. ಆದಿಲ್‌ಷಾಹಿಗಳ ಕ್ರಿ.ಶ. ೧೬೪೬ರ ಶಾಸನ ಅಣ್ಣಿಗೇರಿಯಲ್ಲಿದೆ. ಈ ಶಾಸನವು ರುಸ್ತುಂ ಜಮಾನನು ರುಸ್ತುಂಪೇಟೆಯನ್ನು ಕಟ್ಟಿಸಿ ೧೨ ವರ್ಷಗಳ ಕಾಲ ವ್ಯಾಪಾರಿಗಳಿಗೆ ಬಿಟ್ಟು ಕೊಟ್ಟ ವಿಷಯವನ್ನು ಪ್ರಸ್ತಾಪಿಸುತ್ತದೆ.

ಧಾರವಾಡ ಜಿಲ್ಲೆಯು ಮೋಘಲರ, ಮರಾಠರ, ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. ೧೬೯೦ರಲ್ಲಿ ಔರಂಗಜೇಬನು ಷೇಕದಾವೂದ ಎಂಬ ಮುಲ್ಲಾನಿಗೆ ನೀಡಿದ ಒಂದು ಭೂದಾನ ಪತ್ರದಲ್ಲಿ ಧಾರವಾಡದ ಮಾಳಾಪುರ ಬಿಜಾಪುರಕ್ಕೆ ಸೇರಿತ್ತು ಎಂಬ ಉಲ್ಲೇಖವಿದೆ. ಕ್ರಿ.ಶ. ೧೭೮೫ರಲ್ಲಿ ಮಿರ್ಜಾಸೈಪುಲ್ಲಾ ಧಾರವಾಡದ ಕಿಲ್ಲೆದಾರನಾಗಿದ್ದ. ನಂತರ ಔರಂಗಜೇಬನ ಕಾಲದಲ್ಲಿ ಕ್ರಿ. ಶ. ೧೭೯೨ರಲ್ಲಿ ಸಿಯಾಲ್‌ಖಾನನ ನಂತರ ಅಲಾಫಖಾನ, ಮೊಹಿನಉದ್ದೀನ ಕಲಂದರಖಾನ ಮುಂತಾದವರು ಇದ್ದರೆಂದು ಕೈಫಿಯತ್ ಉಲ್ಲೇಖಿಸುತ್ತದೆ.

**ಮಹಾಮಂಡಳೇಶ್ವರರು:**

ಆಡಳಿತದಲ್ಲಿ ಮಹಾಮಂಡಳೇಶ್ವರರು ಪ್ರಮುಖಪಾತ್ರ ವಹಿಸಿದ್ದಾರೆ. ಇವರು ಮಾಂಡಳಿಕರಾಗಿ ಹಾಗೂ ಸ್ವತಂತ್ರವಾಗಿ ರಾಜ್ಯಭಾರ ಮಾಡಿದ ಉದಾಹರಣೆಗಳು

ದೊರೆಯುತ್ತವೆ. ಇವರನ್ನು ಮಂಡಳದ ಒಡೆಯ ಮಂಡಳೇಶ್ವರರು, ಮಂಡಳಾದಿಪತಿ, ಮಂಡಳೇಶ ಮಹಾಮಂಡಳೇಶ್ವರರೆಂದು ಕರೆಲಾಗಿದೆ. ಈತ ಚಕ್ರವರ್ತಿಯಷ್ಟೇ ಪ್ರಬಲನಾಗಿದ್ದನು. ಆಡಳಿತದ ಅನುಕೂಲಕ್ಕಾಗಿ ಚಕ್ರವರ್ತಿಯಂತೆ ಮಹಾಮಂಡಳೇಶ್ವರರು ಸ್ವತಂತ್ರವಾದ ಮಂತ್ರಿಮಂಡಲ ಅಧಿಕಾರವರ್ಗ ಮತ್ತು ಸೈನಿಕರನ್ನು ಹೊಂದಿದ್ದರು. ಧಾರವಾಡ ಪರಿಸರದಲ್ಲಿ ಗೋವೆಯ ಕದಂಬರು, ಹಾನಗಲ್ಲ ಕದಂಬರು ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರರಾಗಿ ಅಧಿಕಾರ ನಿರ್ವಹಿಸಿದ್ದಾರೆ. ಅಲ್ಲದೇ ಕೆಲಕಾಲ ಗೋವೆಯ ಕದಂಬರು ಸ್ವತಂತ್ರವಾಗಿಯೇ ರಾಜ್ಯವಾಳಿದ್ದಾರೆ.

**ಗೋವೆಯ ಕದಂಬರು:**

ಬನವಾಸಿ ಕದಂಬರ ವಂಶಸ್ಥರೆಂದು ಹೇಳಿಕೊಳ್ಳುವ ಗೋವೆಯ ಕದಂಬರು ಆರಂಭದಲ್ಲಿ ಚಂದ್ರಪುರದಿಂದ ಆಡಳಿತವನ್ನು ಪ್ರಾರಂಭಿಸಿದರು. ಇವರಿಗೆ ಬನವಾಸಿ ಕದಂಬರಿಗಿದ್ದ ಪುರವರಾಧೀಶ್ವರ ಎಂಬ ಬಿರುದು ಇತ್ತು. ಪರ್ವತ ಇವರ ರಾಜಲಾಂಛನ. ಅದರಲ್ಲಿ ಸಿಂಹ, ಧ್ವಜ, ವಾನರಧ್ವಜ ಕಂಡುಬರುತ್ತವೆ. ಶಿವನನ್ನು ತಮ್ಮ ಕುಲದೇವತೆಯನ್ನಾಗಿ ಮಾಡಿಕೊಂಡಿದ್ದರು-ಶಿವನನ್ನು 'ಸಪ್ತಕೋಟೇಶ್ವರ' ಎಂದು ಸಹ ಕರೆಯುತ್ತಿದ್ದರು. ಚಂದ್ರಪುರ (ಸಾಲ್ಸೆಟಿನಲ್ಲಿರೂವ ಚಾಂದೋರ) ಮತ್ತು ಅನಿಲಾಪುರ (ಧಾರವಾಡ ಜಿಲ್ಲೆಯ ಅಳ್ನಾವರ)ಗಳು ಈ ವಂಶದ ಒಂದನೆಯ ಜಯಕೇಶಿಯ ಕಾಲದಲ್ಲಿ ಕುಂದೂರು (ನರೇಂದ್ರ) ಹಾಗೂ ಪೆರ್ಮಾಡಿಯ ಕಾಲದಲ್ಲಿ ಸಂಪಗಾವಿ ಕದಂಬರ ರಾಜಧಾನಿಗಳಾಗಿದ್ದವು. ಗೋವೆಯ ಕದಂಬರ ಕಾಲದಲ್ಲಿ ಕೊಂಕಣ-೯೦೦. ಪಲಸಿಗೆ-೧೨೦೦೦. ಕಾವಡೆದೋಪ-೨೫೦೦೦ ಮಾವಳ್ಳಿ-೫೦೦, ಹೈವೆ-೫೦೦, ವೇಳುಗ್ರಾಮ-೭೦, ಉಣಕಲ್ಲ-೩೦, ಸಬ್ಬಿ-೩೦, ಉಸ್ತುಗ್ರಾಮ-೩೦, ಕಾದರವಳ್ಳಿ-೩೦, ಪೊಳೇಗಿಲುದೆ-೩೦, ಕೊಂತಕುಳಿ-೩೦[೧೯] ವಿಭಾಗಗಳಿದ್ದವು.

ಗೋವೆಯ ಕದಂಬರ ವಂಶವು ಒಂದನೆಯ ಷಷ್ಟನಿಂದ ಪ್ರಾರಂಭವಾಯಿತು. ಅವನ ನಂತರ ನಾಗವರ್ಮ, ಮೊದಲ ಗೊವಲದೇವ ಕ್ರಮವಾಗಿ ಆಳ್ವಿಕೆ ಮಾಡಿದರು. ಮೊದಲ ಗೊವಲದೇವನ ಮಗನಾದ ಇಮ್ಮಡಿ ಷಷ್ಟನ ಅಧಿಪತ್ಯಕ್ಕೆ ಕೊಂಕಣ-೯೦೦, ಪಲಸಿಗೆ-೧೨೦೦೦ ನಾಡುಗಳು ಸೇರಿದ್ದವು. ಕ್ರಿ.ಶ. ೧೧೨೫ರ ನರೇಂದ್ರದ ಶಾಸನವು[೨೦] ಇಮ್ಮಡಿ ಜಯಕೇಶಿಯ ಕಾಲದ್ದಾದರೂ, ಇದು ಇಮ್ಮಡಿ ಷಷ್ಟನನ್ನು ಪಶ್ಚಿಮ ಬೋಧಿಪತಿ ಎಂದು ಉಲ್ಲೇಖಿಸಿದೆ. ಇವನ ಸುಸಜ್ಜಿತ ಸೈನ್ಯ ವ್ಯವಸ್ಥೆಗೆ ಅವನು ಕಳುಹಿಸಿದ ಲಂಕಾದವರೆಗಿನ ನೌಕಾ ಸೈನ್ಯವೇ ಸಾಕ್ಷಿಯಾಗಿದೆ. ಅಲ್ಲದೆ ಅವನ ರಾಣಿಯಾದ ಅಕ್ಕಾದೇವಿ

ಮುಮ್ಮಡಿ ರಾಜನ ಮಗಳನ್ನು ವರಿಸಿದ್ದನೆಂದು ಶಾಸನ ತಿಳಿಸುತ್ತದೆ. ಈ ಷಷ್ಟದೇವನ ಕಾಲದಲ್ಲಿ ಕುದಲಿ ಗ್ರಾಮದಲ್ಲಿ ಬಾದುಬ್ಬೆ (ಬನಶಂಕರಿ)ಯ ಪ್ರತಿಷ್ಠೆ ಮಾಡಿಸಲಾಗಿದೆ.[೨೧]

ಷಷ್ಟನ ನಂತರ ಅವನ ಮಗನಾದ ಇಮ್ಮಡಿ ಗೋವಲದೇವನು, ಅವನ ನಂತರ ಇವನ ತಮ್ಮನಾದ ಒಂದನೆಯ ಜಯಕೇಶಿಯು ಅಧಿಕಾರಕ್ಕೆ ಬಂದರು. ಒಂದನೆಯ ಜಯಕೇಶಿ ಆಡಳಿತದ ದೃಷ್ಟಿಯಿಂದ ರೇವುಪಟ್ಟಣವಾಗಿದ್ದ ಗೋವೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಭಿವೃದ್ಧಿ ಪಡಿಸಿದನು. ಇವನ ರಾಜಧಾನಿಯ ಬಗ್ಗೆ ಪ್ರಥಮವಾಗಿ ಅಮ್ಮಿನಭಾವಿಯ ಶಾಸನ ಉಲ್ಲೇಖಿಸುತ್ತದೆ.[೨೨]

ಜಯಕೇಶಿಯ ನಂತರ ಅವನ ಮಗನಾದ ಇಮ್ಮಡಿ ಜಯಕೇಶಿ ಅಧಿಕಾರಕ್ಕೆ ಬಂದನು. ಈತ ಗೋವೆಯ ಕದಂಬರಲ್ಲೇ ಅತ್ಯಂತ ಪ್ರಖ್ಯಾತ ದೊರೆಯಗಿದ್ದನು. ಇವನು ಕಲ್ಯಾಣ ಚಾಲುಕ್ಯರ ಆರನೇ ವಿಕ್ರಮಾದಿತ್ಯ, ಸೋಮೇಶ್ವರ ಹಾಗೂ ಇಮ್ಮಡಿ ಜಗದೇಕಮಲ್ಲರಿಗೆ ಸಾಮಂತನಾಗಿದ್ದನು. ಇವನ ಕಾಲದಲ್ಲಿ ಸಾಮ್ರಾಜ್ಯವನ್ನು ಕೊಂಕಣ-೯೦೦, ಪಲಸಿಗೆ-೧೨೦೦೦, ಉಣಕಲ್ಲ-೩೦, ಸಬ್ಬಿ-೩೦, ಉತ್ಸುಗ್ರಾಮ ೩೦, ಕಾದರವಳ್ಳಿ-೩೦, ಪೋಳೆಗೇರಿ-೩೦, ಹೈವೆ-೫೦೦, ವೇಲುಗ್ರಾಮ-೭೦ ಆಡಳಿತದಲ್ಲಿ ಒಳಗೊಂಡಿತ್ತು.

ಕಲ್ಯಾಣ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಪುತ್ರಿ ಮೈಳಲದೇವಿ ಇಮ್ಮಡಿ ಜಯಕೇಶಿಯ ವಲ್ಲಭೆ. ಇಮ್ಮಡಿ ಜಯಕೇಶಿಗೆ ಮೂವರು ಮಕ್ಕಳು ಸಾವಿತ್ರಿ, ಪೆರ್ಮಾಡಿದೇವ ಮತ್ತು ವಿಜಯಾದಿತ್ಯ. ಹಿರಿಯ ಮಗಳಾದ ಸಾವಿತ್ರಿ ತೈಲಪನ ಮಗನಾದ ಗಂಗೀದೇವನನ್ನು ವರಿಸಿದ್ದಳು. ಕ್ರಿ.ಶ. ೧೧೨೩ರಲ್ಲಿ[೨೩] ಜಯಕೇಶಿದೇವನ ಪಟ್ಟಮಹಿಷಿ ಮೈಳಲದೇವಿಯು ಕುರಡಿಕೇರಿಯ ಕುಡಿಯೇಶ್ವರ ದೇವರಿಗೆ ಸುಂಕದಾನ ಮಾಡಿದ್ದು ತಿಳಿದುಬರುತ್ತದೆ.

ಕ್ರಿ.ಶ.೧೧೨೫ರಲ್ಲಿ ಜಯಕೇಶಿದೇವ ಮತ್ತು ಆತನ ರಾಣಿ ಮೈಳಲಮಹಾದೇವಿ ಇಬ್ಬರು ಕೊಂಕಣ-೯೦೦, ಪಲಸಿಗೆ-೧೨೦೦೦, ಕವಡೆದ್ವೀಪ-೨೫೦೦೦, ಹೈವೆ-೫೦೦ಗಳನ್ನು ಆಳುತ್ತಿದ್ದರೆಂದು ನರೇಂದ್ರ ಶಾಸನವು ಉಲ್ಲೇಖಿಸುತ್ತದೆ. ಈ ಅವಧಿಯಲ್ಲಿ ಕುಂದೂರು ರಾಜಧಾನಿಯಾಗಿತ್ತು. ಕ್ರಿ.ಶ. ೧೧೩೪ರಲ್ಲಿ ಜಯಕೇಶಿಯು ಬೇಗೂರು ನೆಲೆವೀಡಿನಲ್ಲಿದ್ದಾಗ ಮಹಾರಾಣಿ ಮೈಳಲದೇವಿ, ಪೆರ್ಮಾಡಿದೇವ ಮತ್ತು ಕುಮಾರ ವಿಜಯಾದಿತ್ಯರೊಡನೆ ಕೂಡಿ ಮಂದೂರ (ಮದನಭಾವಿ) ಕಲಿದೇವಸ್ವಾಮಿಗೆ ದತ್ತಿ ನೀಡಿದ್ದಾಳೆ. ಅಲ್ಲದೆ ಅಮ್ಮಿನಭಾವಿ ಶಾಸವು ದೇವಾಲಯ ಕೆರೆ-ಕಟ್ಟೆಗಳಿಗೆ ದಾನ-ದತ್ತಿ ನೀಡಿದ ವಿಷಯನ್ನು ಪ್ರಸ್ತಾಪಿಸುತ್ತದೆ.

ಪೆರ್ಮಾಡಿದೇವ ಆತನ ತಮ್ಮನಾದ ವಿಜಯಾದಿತ್ಯ ಅವನ ಮಗ ಮುಮ್ಮಡಿ ಜಯಕೇಶಿಯ ಹಿರಿಯಮಗ ವಜ್ರದೇವನ ಉಲ್ಲೇಖಗಳು ಬರುತ್ತವೆ. ಮುಮ್ಮಡಿ ಜಯಕೇಶಿಗೆ ವಜ್ರದೇವನ ಮತ್ತು ತ್ರಿಭುವನಮಲ್ಲ ಎಂಬ ಇಬ್ಬರು ಮಕ್ಕಳಿದ್ದರು. ವಜ್ರದೇವನ ತನ್ನ ತಂದೆಯ ಕಾಲದ ಸುಮಾರು ೧೨೦೫ ರಿಂದ ೧೨೨೫ರವರೆಗಿನ ಶಾಸನಗಳಲ್ಲಿ ಉಲ್ಲೇಖವಿದೆ. ವಜ್ರದೇವನ ನಂತರ ಈತನ ತಮ್ಮನಾದ ತ್ರಿಭುವನಮಲ್ಲನು ಅಧಿಕಾರಕ್ಕೆ ಬಂದನು. ಈತನು ತನ್ನ ಪಿತ್ರಾರ್ಜಿತ ರಾಜ್ಯವನ್ನು ಸ್ವತಂತ್ರವಾಗಿ ಆಳತೊಡಗಿದನು. ಈತನ ಆಳ್ವಕೆಯಲ್ಲಿ ಕ್ರಿ.ಶ.೧೨೩೭ರಲ್ಲಿ ನೂಲ್ವಿಯ ಅರವತ್ತೊಕ್ಕಲು ದೇವಾಲಯಕ್ಕೆ ದತ್ತಿ ನಿಡಿದ್ದಾನೆ. ಈತನ ಆಳ್ವಿಕೆಗೆ ಸಂಬಂಧಿಪಟ್ಟಂತೆ ಒಂದು ವೀರಗಲ್ಲು ಶಾಸನ ಅಮ್ಮಿನಭಾವಿ ಗ್ರಾಮದಲ್ಲಿದೆ.

**ಆಡಳಿತ ಪದ್ಧತಿ:**

ಪ್ರಾಚೀನ ಕಾಲದ ಆಡಳಿತ ಪದ್ಧತಿಯನ್ನು ಪರಿಶೀಲಿಸಿದಾಗ ಅದು ವಂಶಪಾರಂಪರ್ಯವಾಗಿ ಮುಂದುವರೆಯುತ್ತಿತ್ತು ಎಂಬುದು ತಿಳಿದು ಬರುತ್ತದೆ. ಸಾಮ್ರಾಜ್ಯವನ್ನು ಚಕ್ರವರ್ತಿಗಳು, ಇವರ ಕೈಕೆಳಗೆ ಮಹಾಮಂಡಲೇಶ್ವರರು, ಮಹಾಸಾಮಂತರು, ಪ್ರಭುಗಾವುಂಡ, ಗಾವುಂಡರು, ಅಧಿಕಾರಿಗಳು ಆಳ್ವಿಕೆ ನೆಡೆಸುತ್ತಿದ್ದರು. ಧಾರವಾಡ ಪರಿಸರದ ಶಾಸನಗಳಲ್ಲಿ ಆಡಳಿತಕ್ಕೆ ಸಂಬಂಧಿಸಿದಂತೆ ಚಕ್ರವರ್ತಿ, ರಾಣಿಯರು, ಮಹಾಸಾಮಂತ, ಗಾವುಂಡರು ಕಂಡುಬರುತ್ತಾರೆ. ಅಧಿಕಾರ ವರ್ಗದಲ್ಲಿ ರಾಜ್ಯಾಧ್ಯಕ್ಷ, ವಿಷಯಾಧಿಪತಿ, ಸುಂಕದ ಅಧಿಕಾರಿ, ಮತ್ತು ದಂಡನಾಯಕರು ಕಾಣಬರುತ್ತಾರೆ.

**ವಿಷಯಾಧಿಕಾರಿ:**

ಆಡಳಿತದಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸುವ ವಿಷಯಾಧಿಕಾರಿಗಳು ವಿಷಯವೆಂಬ ಆಡಳಿತದ ವಿಭಾಗವನ್ನು ನೋಡಿಕೊಳ್ಳುತ್ತಿದ್ದರು. ಗುಡಗೇರಿ ಶಾಸನವು ಭುವನೈಕ್ಯಮಲ್ಲನ ಮಹಪ್ರಧಾನ ದಂಡನಾಯಕ ರುದ್ರಬಟ್ಟೋಪಾಧ್ಯಾಯ ಗುಡಗೇರಿಯನ್ನು ನೋಡಿಕೊಳ್ಳುತ್ತಿದ್ದನೆಂದು ತಿಳಿಸುತ್ತದೆ. ಅವನ ಅಧೀನದಲ್ಲಿ ವಿಷಯಾಧಿಕಾರಿಯಾಗಿ ಮುದ್ದಣ್ಣನಾಯಕ ಈಶ್ವರಬದ್ಧನಿದ್ದನು. ಅಲ್ಲದೆ ಅಮ್ಮಿನಭಾವಿಯ ಶಾಸನದಲ್ಲಿಯೂ[೨೪] ವಿಷಯಾಧಿಕಾರಿಯ ಉಲ್ಲೇಖ ಕಂಡುಬರುತ್ತದೆ.

**ದಂಡನಾಯಕ:**

ದಂಡನಾಯಕರು ಚಕ್ರವರ್ತಿ ಅಥವಾ ಮಹಾಮಂಡಳೇಶ್ವರನಿಂದ ನೇಮಕಗೊಳ್ಳುತ್ತಿದ್ದರು. ಇವರ ಆಡಳಿತದಲ್ಲಿ ಬರುವ ಸುಂಕ, ಸೈನ್ಯ, ವಿದೇಶಾಂಗ ಹೀಗೆ ವಿವಿಧ ಇಲಾಖೆಗಳ ಮುಖಂಡತ್ವವನ್ನು ವಹಿಸಿಕೊಳ್ಳುತ್ತಿದ್ದರು. ಈ ದಂಡನಾಯಕರು

ಪ್ರಾಂತಗಳಲ್ಲಿ ಹಾಗೂ ಕೇಂದ್ರಿಯಗಳಲ್ಲಿ ತಮ್ಮ ಅಧಿಕಾರವನ್ನು ನಿರ್ವಹಿಸುತ್ತಿದ್ದರು. ದಂಡನಾಯಕನಿಗೆ ಕೆಲವು ಸಂದರ್ಭಗಳಲ್ಲಿ 'ಮಹಾಪ್ರಧಾನ' ಎಂಬ ಗೌರವ ಸೂಚಕ ಪದವನ್ನು ಬಳಸಲಾಗಿದೆ.

ಗುಡಗೇರಿಯ ಶಾಸನವು[೨೫] ಕುಂತಳ ಮಹಾದೇವಿಯಮ್ಮ ಮುಳಗುಂದ ನೆಲೆವಿಡಿನಿಂದ ಆಳುತ್ತಿದ್ದಾಗ, ಗುಡಗೇರಿಯನ್ನು ಮಹಾಪ್ರಧಾನ ದಂಡನಾಯಕ ರುದ್ರಭಟ್ಟೋಪಾಧ್ಯಾಯನು ನೋಡಿಕೊಳ್ಳುತ್ತಿದ್ದ ಬಗ್ಗೆ ಪ್ರಸ್ತಾಪಿಸಿದೆ. ಹಾಗೆ ನರೇಂದ್ರದ ಶಾಸನದಲ್ಲಿ[೨೬] ಮೈಳಲ ಮಹಾದೇವಿಯ ಮನೆವರ್ಗಡೆ ದಂಡನಾಯಕ ಲಕ್ಷ್ಮರಸ ಇದ್ದ ಬಗ್ಗೆ ಉಲ್ಲೇಖಿಸುತ್ತದೆ. ಅಲ್ಲದೇ ಇನ್ನೊಂದು ಶಾಸನದಲ್ಲಿ ಮಹಾಪ್ರಧಾನ ರಾಜ್ಯಾಧ್ಯಕ್ಷ ಮಹಾಪಸಾಯಿತ ಮನೆವರ್ಗಡೆ ದಂಡನಾಯಕ ಸಿಂಗರಸರ ಉಲ್ಲೇಖಿವಿದೆ. ಇವನು ನರೇಂದ್ರದಲ್ಲಿ ಲಕ್ಷ್ಮೀಣೇಶ್ವರ ದೇವಾಲಯವನ್ನು ನಿರ್ಮಿಸಿದನು.[೨೭]

ಬೆಲವಂತರ ಶಾಸನದಲ್ಲಿ ಮಾದಿರಾಜ ದಂಡನಾಯಕ ತಮ್ಮಿಯೂರು-೧೨, ಮಾವಳ್ಳಿ, ಕೋಟೆಕಿರುವತ್ತಿಗಳನ್ನು ನೋಡಿಕೊಳ್ಳುತ್ತಿದ್ದಾಗ, ಸಾಮಂತ ಕಗ್ಗ ಅಮ್ಮಿಯನಭಾವಿ, ನೆಲ್ಲುಂದಗಳನ್ನು ನೋಡಿಕೊಳ್ಳುತ್ತಿದ್ದನು. ಈ ಶಾಸನವನ್ನು ಗಮನಿಸಿದಾಗ ಸಂಸ್ಥಾನದಲ್ಲಿ ಚಂಗಚಮಾಪನ ಮನೆತನದವರು ಪ್ರಸಿದ್ಧ ದಂಡನಾಯಕರಾಗಿ ಕಾರ್ಯನಿರ್ವಹಿಸಿದಂತೆ ಕಾಣುತ್ತದೆ.

**ಆಡಳಿತದ ವಿಭಾಗಗಳು:**

ಆಡಳಿತವನ್ನು ಸುಲಭವಾಗಿ ಹಾಗೂ ವ್ಯವಸ್ಥಿತವಗಿ ನೆಡೆಸಿಕೊಂಡು ಹೋಗಲು ವಿಭಾಗ ಉಪವಿಭಾಗ ಮಾಡಿ ಪ್ರತಿಯಾಂದು ವಿಭಾಗವನ್ನು ಮುಖ್ಯಸ್ಥನಿಗೆ ವಹಿಸಿಕೊಡಲಾಗುತ್ತಿತ್ತು. ಪ್ರಾಚೀನ ಕಾಲದ ಆಡಳಿತವನ್ನು ಕಂಡುಕೊಂಡಾಗ ಆಡಳಿತವನ್ನು ರಾಷ್ಟ್ರ, ಮಂಡಲ, ನಾಡು, ಕಂಪಣ, ವಿಷಯ, ಎಂದು ವಿಭಾಗ ಮಾಡಿದ್ದನ್ನು ಕಾಣುತ್ತೇವೆ.

ಧಾರವಾಡ ಜಿಲ್ಲೆಯಲ್ಲಿ ಪ್ರಮುಖವಾಗಿ ಕಂಡುಬರುವ ಆಡಳಿತದ ವಿಭಾಗಗೆಳೆಂದರೆ, ಪಲಸಿಗೆ ೧೨೦೦೦, ಕುಂದೂರು-೫೦೦, ಉಣಕಲ್ಲು-೩೦, ಸಬ್ಬಿ-೩೦, ಪಾನುಂಗಲ್ಲು-೫೦೦, ಕೊಂತಕುಳಿ-೩೦, ವೇಳುಗ್ರಾಮೆ-೭೦, ಉತ್ಸುಗ್ರಾಮ-೩೦, ಕಾದರವಳ್ಳಿ-೩೦, ಹೈವೆ-೫೦೦ ಕಂಡುಬರುತ್ತವೆ. ಅಧ್ಯಯನದ ದೃಷ್ಟಿಯಿಂದ ಇವುಗಳನ್ನು ಈ ಕೆಳಕಂಡಂತೆ ವಿವರಿಸಲಾದೆ.

**ಪಲಸಿಗೆ-೧೨೦೦೦:**

ಪಲಸಿಗೆ-೧೨೦೦೦ ಇದನ್ನು ಶಾಸನಗಳಲ್ಲಿ ಮುಖ್ಯವಾಗಿ 'ಪನ್ನಿರ್ಚ್ಛಾಸಿರ, ಪಲಸಿಗೆದೇಶ, ಪಲಸಿಗೆನಾಡು, ಪಲಸಿಕಾದೇಶ[೨೮] ಎಂದು ಉಲ್ಲೇಖಿಸಲಾಗಿದೆ.

ಈ ಪ್ರದೇಶದಲ್ಲಿ ಕಲ್ಯಾಣದ ಚಾಲುಕ್ಯರ ಮಹಾಮಂಡಳೇಶ್ವರರಾದ ಗೋವೆಯ ಕದಂಬರು ಆಳ್ವಿಕೆ ನಡೆಸಿದ್ದಾರೆ. ೧೨೦೦೦ ಎಂಬುದು ಗ್ರಾಮಗಳನ್ನು ಸೂಚಿಸುತ್ತದೆ. ಹುಬ್ಬಳ್ಳಿ, ಕುಂದಗೋಳ, (ನೈರುತ್ಯ ಭಾಗದ) ತಾಲೂಕುಗಳು ಮುಖ್ಯವಾಗಿ ಈ ಆಡಳಿತಕ್ಕೆ ಒಳಪಟ್ಟಿದ್ದವು.

ಇದು ಉತ್ತರಕ್ಕೆ ಮಲಪ್ರಭಾನದಿ ಹಾಗೂ ಕೊಂಡಿನಾಡು, ಪೂರ್ವಕ್ಕೆ ಬೆಳ್ವೊಲ-೩೦೦, ದಕ್ಷಿಣ ಮತ್ತು ನೈರುತ್ಯಕ್ಕೆ ಪಾನುಂಗಲ್ಲು-೫೦೦ ಮತ್ತು ದಕ್ಷಿಣಕ್ಕೆ ಕೊಂಕಣ-೯೦೦ ಪ್ರದೇಶಗಳನ್ನು ಹೊಂದಿದೆ. ಈ ಪ್ರದೇಶವು ಮಾವಳೆ-೫೦೦ 'ಕುಂದೂರು-೫೦೦, ಉಣಕಲ್ಲು-೩೦, ಸಬ್ಬಿ-೩೦ ಮತ್ತು ಮಾರಚವಾಡಿ ನಾಡುಗಳನ್ನು ಉಪವಿಭಾಗಗಳನ್ನು ಹೊಂದಿತ್ತು.

**ಕುಂದೂರು-೫೦೦:**

ಕುಂದೂರು-೫೦೦ ಎಂಬುದು ಇಂದಿನ ಧಾರವಾಡ ತಾಲೂಕಿನ ನರೇಂದ್ರ ಗ್ರಾಮವಾಗಿದೆ. ಇದು ಐನೂರು (೫೦೦) ಗ್ರಾಮಗಳನ್ನೊಳಗೊಂಡ ಒಂದು ಮುಖ್ಯವಾದ ಪಟ್ಟಣವಾಗಿತ್ತು. ಕನಕೂರಿನ ಶಾಸನದಲ್ಲಿ[೨೯] "ಕೊಂಕಣಾಧಿಪತಿ ಶ್ರೀಮನ ಮಹಾಮಂಡಳೇಶ್ವರ ಜಯಕೇಶಿದೇವರ ವಿವಾಹ ಮಹೋತ್ಸವದ ಕಾಲದಲ್ಲಿ ಶ್ರೀಮತ್ರಿಭುವನಮಲ್ಲ ದೇವರು ಕುಂದೊರೈನೂರರರ ಬಳಿಯ ಬಾಡಂ ಕನಕಾಪುರದಂ ಶ್ರೀಸೌರಾಷ್ಟ್ರದ ಶ್ರೀಸೋಮನಾಥ ದೇವರ ಧೂಪಕ್ಕಾಗಿ ಕನಕಾಪುರ ಗ್ರಾಮವನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ. ಕುಂದೂರು-೫೦೦ರ ಕನಕಾಪುರವು ಧಾರವಾಡ ತಾಲೂಕಿನ ಕನಕೂರು ಆಗಿದೆ. ಈ ಪ್ರದೇಶವನ್ನು ಮನಗುಂಡಿ, ಧಾರವಾಡ, ನರೇಂದ್ರ, ನೂಲ್ವಿ, ಕುರುಡಿಕೇರಿ, ಮಿಶ್ರಿಕೋಟಿ, ಶಾಸನಗಳು ಉಲ್ಲೇಖಿಸುತ್ತದೆ.

**ಮಾವಳೆ-೫೦೦:**

ಮಾವಳೆ-೫೦೦ ಎಂಬುದು ಪಲಸಿಗೆ -೧೨೦೦೦ರ ಒಂದು ಉಪವಿಭಾಗವಾಗಿದೆ. ಇಂದು ಕಲಘಟಗಿ ತಾಲೂಕಿನ ಮಾವಳ್ಳಿ ಗ್ರಾಮವಾಗಿ ಪರಿಣಮಿಸಿದೆ. ಸಂಗಮೇಶ್ವರ, ಕಲಕ್ಕುಂಡಿ ಶಾಸನಗಳಲ್ಲಿ ಮಾವಳೆನಾಡು ಎಂದು ಕ್ಪರೆಯಲಾಗಿದೆ.

ಕಲಘಟಗಿ ತಾಲೂಕಿನ ತಡಸ, ಕಲಘಟಗಿ, ಹೆಬ್ಬಾಳರಸ್ತೆಯ ದಕ್ಷಿಣಭಾಗ, ಯಲ್ಲಾಪುರ ತಾಲೂಕು, ಮುಂಡಗೋಡ ತಾಲೂಕಿನ ವಾಯುವ್ಯ ಭಾಗದಲ್ಲಿರುವ ಕೆಲವು ಹಳ್ಳಿಗಳು ಹಾಗೂ ಹಳಿಯಾಳ ತಾಲೂಕಿನ ಕೆಲವು ಗ್ರಾಮಗಳು ಈ ಪ್ರದೇಶದಲ್ಲಿದ್ದವು. ಇದು ಉತ್ತರಕ್ಕೆ ಹಾಗೂ ಪೂರ್ವಕ್ಕೆ ಹಲಸಿಗೆ ನಾಡಿನ ಉಪವಿಭಾಗವಾದ ಕುಂದೂರು-೫೦೦ ದಕ್ಷಿಣ ಮತ್ತು ಆಗ್ನೇಯಕ್ಕೆ ಪಾನುಗಲ್ಲು-೫೦೦ರ ಉಪವಿಭಾಗವಾದ ಕೊಂಕಣ-೩೦, ಪಶ್ಚಿಮಕ್ಕೆ ಪಲಸಿಗೆ ನಾಡಿನ ಒಚಿದು ಭಾಗವನ್ನು ತನ್ನ ಮೇರೆಯಾಗಿ ಒಳಗೊಂಡಿತ್ತು.

**ಉಣಕಲ್ಲು-೩೦:**

ಇವತ್ತಿನ ಹುಬ್ಬಳ್ಳಿ ತಾಲೂಕಿನ ಉಣಕಲ್ಲು ಗ್ರಾಮವೇ ಇದಾಗಿದೆ. ಇದು ಮೂವತ್ತು ಗ್ರಾಮಗಳನ್ನು ಒಳಗೊಂಡ ಒಂದು ವಿಭಾಗವಾಗಿತ್ತು. ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡ ಅಮ್ಮಿನಭಾವಿ ಪರಿಸರದಲ್ಲಿ ಬರುವ ನರೇಂದ್ರ ಶಾಸನಗಳಲ್ಲಿ[೩೦] ಈ ಪ್ರದೇಶವದ ಉಲ್ಲೇಖಗಳು ಕಂಡುಬರುತ್ತದೆ.

**ಸಬ್ಬಿ-೩೦:**

ಇಂದಿನ ಹುಬ್ಬಳ್ಳಿ ತಾಲೂಕಿನ ಗ್ರಾಮವೇ ಸಬ್ಬಿ-೩೦ ಆಗಿತ್ತು ಎಂಬುದು ನರೇಂದ್ರದ ಶಾಸನವು ತಿಳಿಯಪಡಿಸುತ್ತದೆ.

**ಪಾನುಗಲ್ಲು-೫೦೦:**

ಹಾವೇರಿ ಜಿಲ್ಲೆಯ ಹಾನಗಲ್ಲು ತಾಲೂಕು ಅಚಿದು ೫೦೦ ಗ್ರಾಮಗಳಿಗೆ ಮುಖ್ಯವಾದ ಪಟ್ಟಣವಾಗಿತ್ತು. ಶಾಸನಗಳಲ್ಲಿ ಪಾನಗಲ್ಲು ಎಂಬುದಾಗಿ ಉಲ್ಲೇಖವಾಗಿದೆ. ಮುಖ್ಯವಾಗಿ ಮನಗುಂಡಿ, ನರೇಂದ್ರ[೩೧] ಮತ್ತು ಮುಕ್ಕಲ್ಲಿನ ಮೂರು ಶಾಸನಗಳಲ್ಲಿ ಈ ಪಟ್ಟಣದ ಬಗ್ಗೆ ಉಲ್ಲೇಖಗಳು ಕಂಡುಬರುತ್ತವೆ.

**ಕೊಂತಕುಳಿ-೩೦:**

ಕೊಂತಕುಳಿ-೩೦ ಎಂಬುದು ಹಾನಗಲ್ಲ-೫೦೦ ಪಟ್ಟಣದ ಒಚಿದು ಉಪವಿಭಾಗವಾಗಿ ಕಾರ್ಯಮಾಡುತ್ತಿತ್ತು. ಈ ಪ್ರದೇಶವು ಇಂದಿನ ಕಲಘಟಗಿ, ಶಿಗ್ಗಾಂವಿ ತಾಲೂಕುಗಳು ಹಾಗೂ ಮುಂಡಗೋಡ ತಾಲೂಕಿನ ಕೆಲವು ಗ್ರಾಮಗಳನ್ನು ಒಳಗೊಂಡಿತ್ತು. ಇದನ್ನು ಮನಗುಂಡಿ, ನರೇಂದ್ರ[೩೨] ಮುಕ್ಕಲ್ಲು ಶಾಸಗಳು ಪ್ರಚುರಪಡಿಸುತ್ತವೆ.

**ವೇಳುಗ್ರಾಮ-೭೦:**

ವೇಳುಗ್ರಾಮ-೭೦ ಎಂಬುದು ಇಂದಿನ ಬೆಳಗಾವಿ ನಗರವಾಗಿದ್ದು, ಹಿಂದೆ ಇದು ಕೂಹೂಂಡಿ-೩೦೦೦ ಎಂಬುದರ ಉಪವಿಭಾಗವಾಗಿತ್ತು. ಎಪ್ಪತ್ತು ಗ್ರಾಮಗಳನ್ನೊಳಗೊಂಡ

ಇದು ಮುಖ್ಯವಾದ ಪಟ್ಟಣವಾಗಿತ್ತು. ಮನಗುಂಡಿ, ನರೇಂದ್ರದ[೩೩] ಶಾಸನಗಳಲ್ಲಿ ಉಲ್ಲೇಖಗಳು ಬರುತ್ತವೆ.

**ಉತ್ಸುಗ್ರಾಮ-೩೦:**

ಕೂಹೂಂಡಿ ಮೂರುಸಾವಿರದ ಒಂದು ಉಪವಿಭಾಗವಾಗಿತ್ತು. ಮೂವತ್ತು ಗ್ರಾಮಗಳನ್ನು ಒಳಗೊಂಡಂತಹ ಇದು ಬೆಳಗಾವಿ ಜಿಲ್ಲೆಯ ಉಚಗಾಂವ ಗ್ರಾಮದಲ್ಲಿದೆ. ಇದರ ಬಗ್ಗೆ ನರೇಂದ್ರದ[೩೪] ಶಾಸನವು ತಿಳಿಸುತ್ತದೆ.

**ಕಾದರವಳ್ಳಿ-೩೦:**

ಕೂಹೂಂಡಿ-೩೦೦೦ದ ಉಪವಿಭಾಗವಾದ ಕಾದರವಳ್ಳಿ-೩೦ ಗ್ರಾಮಗಳನ್ನು ಒಳಗೊಂಡಂತಹ ಪ್ರಮುಖವಾದ ಉಪವಿಭಾಗವಾಗಿತ್ತು. ಇಂದಿನ ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಕಮ್ರಾಳ್ಳಿಯಾಗಿದೆ. ಇದರ ಬಗ್ಗೆ ನರೇಂದ್ರ[೩೫] ಮನಗುಂಡಿ ಶಾಸನಗಳು ಪ್ರಸ್ತಾಪಿಸುತ್ತದೆ.

**ಹೈವೆ-೫೦೦:**

ಈ ಪ್ರದೇಶವನ್ನು ಶಾಸನಗಳಲ್ಲಿ ಪೈವೆನಾಡು, ಹೈವನಾಡು ಎಂದು ಉಲ್ಲೇಖ ಬರುತ್ತದೆ. ಹೈವೆಕ ಬ್ರಾಹ್ಮಣ ಮತಾವಲಂಬಿಗಳು ಈ ಒಂದು ಪ್ರದೇಶದಲ್ಲಿ ವಾಸಿಸುವುದರಿಂದ ಈ ಹೆಸರು ಬಂದಿದೆ. ಇದು ೫೦೦ ಗ್ರಾಮಗಳ ಮುಖ್ಯ ವಿಭಾಗವಾಗಿದ್ದರ ಬಗ್ಗೆ ಮನಗುಂಡಿ ನರೇಂದ್ರ[೩೬] ಶಾಸನಗಳು ಉಲ್ಲೇಖಿಸುತ್ತವೆ.

**ಸಾಮಾಜಿಕ ವ್ಯವಸ್ಥೆ:**

ಪರಸ್ಪರ ಸಂಬಂಧವುಳ್ಳ ಜನತೆಯ ವ್ಯವಸ್ಥಿತ ಸಮೂಹವನ್ನು ಸಮಾಜವೆನ್ನಬಹುದು, ಭಾರತೀಯ ಸಮಾಜದಲ್ಲಿ ವರ್ಣವ್ಯವಸ್ಥೆ, ಜಾತಿಪದ್ಧತಿಗಳು ಮಹತ್ತರವಾದ ಪಾತ್ರವನ್ನು ನಿರ್ವಹಿಸಿದೆ. ಕನ್ನಡ ನಾಡಿನ ಸಾಮಾಜಿಕ ಸ್ಥಿತಿಗತಿಗಳು ತಲೆಮಾರಿನಿಂದ ತಲೆಮಾರಿಗೆ, ಶತಮಾನದಿಂದ ಶತಮಾನಕ್ಕೆ ಮುಂದುವರೆಕೆಯ ಅಂಶವನ್ನು ಹೊಂದಿರುತ್ತಿದ್ದವು.

ಅಮ್ಮಿನಭಾವಿ ಪ್ರದೇಶವು ಸಹ ಪುರಾತನ ಕಾಲದಲ್ಲಿ ತನ್ನದೇ ಆದ ಸಂಸ್ಕೃತಿಯನ್ನು ಹೊಂದಿದ್ದು, ಸಾಮಾಜಿಕವಾಗಿ ಶಾಂತಿ ಸಮೃದ್ಧಿಯನ್ನು ಸಾಧಿಸಿತ್ತು ಎನ್ನುವದಕ್ಕೆ ಸಾಹಿತ್ಯ ಹಾಗೂ ಶಾಸನಗಳನ್ನು ಹಿನ್ನಲೆಯಾಗಿಟ್ಟುಕೊಂಡು ಸಾಮಾಜಿಕ ವಿಷಯಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಭಾರತದ ಇತರ ಭಾಗಗಳಲ್ಲಿ ವರ್ಣವ್ಯವಸ್ಥೆಯಿದ್ದಂತೆ ಈ ಭಾಗದಲ್ಲಿ ಸಹ ವರ್ಣವ್ಯವಸ್ಥೆ ಜಾರಿಯಲ್ಲಿದ್ದಿತ್ತು.

**ಬ್ರಾಹ್ಮಣರು:**

ಬ್ರಾಹ್ಮಣರು ಸಮಾಜದಲ್ಲಿ ಶ್ರೇಷ್ಠ ವರ್ಗದವರಾಗಿದ್ದು, ಉನ್ನತವಾದ ಮತ್ತು ಗೌರವಯುತವಾದ ಸ್ಥಾನವನ್ನು ಪಡೆದಿದ್ದರು. ವೇದಾಧ್ಯಯನ, ಧರ್ಮಬೋಧನೆ, ದೇವಸ್ಥಾನದ ಆಡಳಿತ, ಖಗೋಳಶಾಸ್ತ್ರ, ಧಾರ್ಮಿಕ ವಿಧಿ-ವಿಧಾನಗಳು ಮುಂತಾದ ಕಾರ್ಯಗಳೆಲ್ಲವು ಬ್ರಾಹ್ಮಣರಿಗೆ ಸೇರಿದವುಗಳಾಗಿದ್ದವು. ಅವರು ತಮ್ಮ ಕಲಾನೈಪುಣ್ಯತೆಗಳಿಂದ ಪ್ರಾಚೀನ ಕಾಲದಿಂದ ಇತ್ತೀಚಿನವರೆಗೂ ಗುರುಗಳಂತೆ, ಪುರೋಹಿತರಂತೆ ವರ್ತಿಸುತ್ತ ಬಂದಿದ್ದಾರೆ. ಅವರು ಪಡೆದ ಪಾಂಡಿತ್ಯಗಳಿಂದ ಅವರನ್ನು 'ದ್ವಿಜ'ರೆಂದು ಪರಿಗಣಿಸಲಾಗಿದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬ್ರಾಹ್ಮಣರು ಸಮಾಜದಲ್ಲಿ ಊರೊಡೆಯರಾಗಿ ಕಾರ್ಯನಿರ್ವಹಿಸಿದ್ದಾರೆ. ಕನಕಾಪುರದ ಊರೊಡೆಯ ವಾಮನಭಟ್ಟೋಪಾಧ್ಯಾಯರಿಗೆ ಜಯಕೇಶಿಯ ವಿವಾಹ ಮಹೋತ್ಸವ ಕಾಲದಲ್ಲಿ ಅವನ ಚಿಕ್ಕಪ್ಪನಾದ ಗೋವೆಯ ಕದಂಬ ಅರಸ ತ್ರಿಭುವನಮಲ್ಲನು ಸೌರಾಷ್ಟ್ರದ ಸೋಮನಾಥ ದೇವರ ಧೂಪ-ದೀಪಕ್ಕಾಗಿ ಕನಕಾಪುರವನ್ನು ದತ್ತಿಯನ್ನಾಗಿ ನೀಡಿದ್ದನು.[೩೭] ಕ್ರಿ.ಶ. ೧೨೪೮[೩೮]ರಲ್ಲಿ ಸರ್ವಾಧಿಕಾರಿ ಅಳಿಯ ಮಲ್ಲಶೆಟ್ಟಿಯು ಭೂಮಿಯನ್ನು ಕೊಂಡು ಬ್ರಹ್ಮಪುರಿ ಹೆಬ್ಬಳ್ಳಿಯು ಐವತ್ಮೂರು ಬ್ರಾಹ್ಮಣರಿಗೆ ವೃತ್ತಿ ಎಂಬತ್ತೊಂಬತ್ತು, ೧೦೦ಕೆ ಅಗಲದ ನಿವೇಶನ ಸೆಬ್ಬಿಗ್ರಾಮ ಮುಂತಾದವುಗಳನ್ನು ದತ್ತಿಯಾನ್ನಾಗಿ ನೀಡಿದನು. ಐವತ್ಮೂರು ಜನ ಬ್ರಾಹ್ಮಣರು ವಿವಿಧ ಗೋತ್ರಕ್ಕೆ ಸಂಬಂಧಿಸಿದವರಾಗಿದ್ದಾರೆ. ಅವರಲ್ಲಿ ಭಾರದ್ವಾಜ ಗೋತ್ರದವರು ಹದಿನಾರು, ಜಮದಗ್ನಿ ವತ್ಸ ಗೋತ್ರದವರು ಐದು, ಕೌಂಡಿನ್ಯ ಗೋತ್ರದವರು ಮೂರು, ಶ್ರೀವತ್ಸಗೋತ್ರ, ಗೌತಮಗೋತ್ರ, ಕೌಶಿಕ ಗೋತ್ರ, ಅಗಸ್ತ್ಯಗೋತ್ರ, ಸಾಂಕ್ಕಾಯನ ಗೋತ್ರದ ಒಬ್ಬೊಬ್ಬರು ವಶಿಷ್ಠಗೋತ್ರ, ಹಾರಿತ ಗೋತ್ರದ ತಲಾ ಒಬ್ಬರು ಕಂಡು ಬರುತ್ತಾರೆ.

**ಕ್ಷತ್ರಿಯರು:**

ಬ್ರಾಹ್ಮಣರ ನಂತರದ ಸ್ಥಾನ ಕ್ಷತ್ರಿಯರದಾಗಿತ್ತು, ಬ್ರಹ್ಮನ ಭುಜಗಳಿಂದ ಹುಟ್ಟಿದ ಕ್ಷತ್ರಿಯರು ಶೌರ್ಯ, ಪರಾಕ್ರಮಗಳ ಪ್ರತೀಕವೆಂದು ಹೇಳಲಾಗಿದೆ. ಇವರ ವೃತ್ತಿ ಎಂದರೆ ತ್ಯಾಗ ಮತ್ತು ಬಲಿದಾನಗಳಿಂದ ಸಮಾಜವನ್ನು ರಕ್ಷಿಸುವುದು. 'ಸತ್ತರೆ ಸ್ವರ್ಗ ಗೆದ್ದರೆ ರಾಜ್ಯ' ಎಂಬ ವೀರ ಉಕ್ತಿಯಂತೆ ನಡೆಯುವವರು ಕ್ಷತ್ರಿಯರು. ಇವರು ಸಾರ್ವಜನಿಕರ ಆಸ್ತಿಯನ್ನು ಕಾಪಾಡುವುದು ಹಾಗೂ ಸಾಮ್ರಾಜ್ಯವನ್ನು ವಿಸ್ತರಿಸುವುದಾಗಿತ್ತು. ಆದರೂ ರಾಜ್ಯದ ಆಡಳಿತದಲ್ಲಿ ಬರುವ ಮಹಾಸಾಮಂತ, ಸರ್ವಾಧಿಕಾರಿ, ದಂಡನಾಯಕ ಮತ್ತು ಯುದ್ದದಲ್ಲಿ ಹೋರಾಡುವವರು ಕ್ಷತ್ರಿಯ ವರ್ಗಕ್ಕೆ ಸೇರಿದವರಾಗಿರುತ್ತಿದ್ದರು.

**ವೈಶ್ಯರು:**

ವೈಶ್ಯರು ಸಮಾಜದಲ್ಲಿ ತೃತೀಯ ಸ್ಥಾನವನ್ನು ಪಡೆದವರಾಗಿದ್ದರು ಇವರು ಬ್ರಹ್ಮನ ತೊಡೆಯಿಂದ ಜನಿಸಿದವರು ಎನ್ನಲಾಗಿದೆ. ಇವರ ಪ್ರಮುಖ ವೃತ್ತಿ ಕೃಷಿ ಮತ್ತು ವ್ಯಾಪಾರ. ವೈಶ್ಯರನ್ನು ಕೆಲವೊಮ್ಮೆ ಸೆಟ್ಟಿಯರೆಂದು ಗುರುತಿಸಲಾಗುತ್ತದೆ. ಈ ವ್ಯಾಪಾರ ವೃತ್ತಿಯಲ್ಲಿ ಸೆಟ್ಟಿಯರು, ಗಾವುಂಡರು ಮುಂತಾದವರು ಸೇರುತ್ತಿದ್ದರು. ಅವರು ಸ್ಥಳೀಯ ಅಧಿಕಾರಿಗಳಾಗಿಯೂ ಸೇವೆಯನ್ನು ಸಲ್ಲಿಸುತ್ತಿದ್ದರು.

**ಶೂದ್ರರು:**

ಶೂದ್ರರು ಸಮಾಜದ ಕೆಳವರ್ಗಕ್ಕೆ ಸೇರಿದವರು. ಬ್ರಹ್ಮನ ಪಾದಗಳಿಂದ ಜನಿಸಿದರೆಂದು ಹೇಳಲಾಗುತ್ತದೆ. ಇವರು ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದರು. ಸಮಾಜದಲ್ಲಿ ಸೇವಾಮನೋಭಾವದಿಂದ ಇರುತ್ತಿದ್ದರು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕುಂಬಾರರು, ತೆಲ್ಲಿಗರು, ಗಾಣಿಗರು, ಸೇಣಿಗರು, ನೂಲಗಾರರು ಮುಂತಾದ ವೃತ್ತಿ ಬಾಂಧವರು ಕಾಣುವರು.

**ಸ್ತ್ರೀಯರ ಸ್ಥಾನಮಾನ:**

ಪ್ರಾಚೀನ ಕಾಲದಿಂದಲೂ ಸ್ತ್ರೀಯರಿಗೆ ಪೂಜ್ಯನೀಯ ಸ್ಥಾನವನ್ನು ನೀಡಿದ್ದಾರೆ. ಸ್ತ್ರೀ ಇಂದಿನವರೆಗೂ ಅನೇಕ ಕಷ್ಟಕಾರ್ಪಣ್ಯಗಳನ್ನು ಅನುಭವಿಸುತ್ತ ಬಂದಿದ್ದಾಳೆ. 'ಯತ್ರನಾರ್ಯಸ್ತು ಪೂಜ್ಯತೆ ತತ್ರದೇವತಾಃ' ಅಂದರೆ ಎಲ್ಲಿ ಸ್ತ್ರೀಯು ಪೂಜಿಸಲ್ಪಡುವಳೋ ಅಲ್ಲಿ ದೇವತೆಯರು ನೆಲೆಸಿರುವರು ಎಂಬ ಮಾತು ಸ್ತ್ರೀಯರ ಹಿರಿಮೆಯನ್ನು ತೋರಿಸಿಕೊಡುತ್ತದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಮೈಳಲದೇವಿ, ಚಂದಿಕಬ್ಬೆ ಹೆಸರಿನ ಸ್ತ್ರೀಯರು ಕಾಣುವರು. ಇವರು ರಾಜಮನೆತನಕ್ಕೆ ಸೇರಿದವರು. ಮೈಳಲಮಹಾದೇವಿ ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಮಗಳಾಗಿ, ಮಹಾಮಂಡಳೇಶ್ವರ ಗೋವೆಯ ಕದಂಬ ಎರಡನೇ ಜಯಕೇಶಿಯ ಮಡದಿಯಾಗಿ ಬೆಳಗಿದ ಸ್ತ್ರೀ. 'ಜಯಕೇಶಿದೇವರಸರ ವಿವಾಹೋತ್ಸವ ಕಾಲದಲ್ಲಿ ಶ್ರೀಮತ್ರಿಭುವನ ಮಲ್ಲದೇವರು ಕುಂದೂರೈನೂರರ ಬಳಿಯ ಬಾಡಂ ಕನಕಾಪುರವಂ ಶ್ರೀಸೌರಾಷ್ಟ್ರದ ಶ್ರೀಸೋಮನಾಥ ದೇವರ ಧೂಪಕ್ಕೆ' ನೀಡಿದುದನ್ನು ಕನಕೂರು ಶಾಸನ ತಿಳಿಸಿದರೆ, ಅವರ ಮದುವೆಯ ವಿವರವನ್ನು ನರೇಂದ್ರ ಶಾಸನ ಉಲ್ಲೇಖಿಸುತ್ತದೆ. ಇವರ ಮದುವೆಯ ವರ್ಣನೆ ಶಾಸನ ಪ್ರಪಂಚದಲ್ಲಿಯೇ ಅಪರೂಪದ ಉಲ್ಲೇಖವಾಗಿದೆ.

ಕ್ರಿ.ಶ. ೧೧೨೩-೨೬ರ ನರೇಂದ್ರ ಶಾಸನದಲ್ಲಿ[೩೯] ಮೈಳಲಮಹಾದೇವಿಯರ ಮನೆವರ್ಗಡೆ ದಂಡನಾಯಕ ಲಕ್ಷ್ಮರಸನ ಉಲ್ಲೇಖ ಬರುತ್ತದೆ. ಇದೇ ಗ್ರಾಮದ ಮತ್ತೊಂದು ಶಾಸನದಲ್ಲಿ[೪೦] ಮೈಳಲದೇವಿಯ ಮಹಾಪ್ರಧಾನ ದಂಡನಾಯಕ ಮನೆವರ್ಗಡೆ ಸಿಂಗರಸನ ಪ್ರಸ್ತಾಪವಿದೆ. ಈ ಸಿಂಗರಸನ ಹೆಂಡತಿ ದಂಡನಾಯಕತಿ ಮೈಳಲದೇವಿಯಕ್ಕ ಎಂಬ ಉಲ್ಲೇಖವಿದೆ. ಪ್ರಾಯಶಃ ಈ ಮೈಳಲದೇವಿಯಕ್ಕ ಸಹ ರಾಜ್ಯದ ಆಡಳಿತದಲ್ಲಿ ಭಾಗಿಯಾಗಿದ್ದಳೆನೋ ಅದಕ್ಕೆ ಇವಳನ್ನು ದಂಡನಾಕತಿ ಎಂದು ಉಲ್ಲೇಖಿಸಲಾಗಿದೆ. ಈ ರೀತಿಯಾಗಿ ಶಾಸನಗಳು ಮೈಳಲದೇವಿ ಆಡಳಿತದಲ್ಲಿ ಭಾಗಿಯಾಗಿದ್ದನ್ನು ಸ್ಪಷ್ಟಪಡಿಸುತ್ತವೆ.

ಕ್ರಿ.ಶ. ೧೧೧೨ರಲ್ಲಿ ಅಮ್ಮಿನಭಾವಿಯಲ್ಲಿ[೪೧] ಉಣಕಲ್ಲದ ಉತ್ತಮರಾಸಿ ಪಂಡಿತರ ಹೆಂಡತಿ ಚಂದಿಕಬ್ಬೆಯ ಉಲ್ಲೇಖ ಬಂದಿದೆ. ಇವಳು ಇಂದ್ರಶಿವಜೀಯವರ ಮಗಳಾಗಿದ್ದು, ದೇವಸತ್ರಕ್ಕೆ ದಾನ ನೀಡಿದ ವಿಷಯವಿದೆ. ಕ್ರಿ.ಶ. ೧೧೨೫ ನರೇಂದ್ರ ಶಾಸನವು ಸೂಳೆಗೇರಿಯ ಪ್ರಸ್ತಾಪ ಮಾಡುತ್ತವೆ. ಅದ್ದರಿಂದ ಸಮಾಜದಲ್ಲಿ ಸೊಳೆಗಾರಿಕೆ ವೃತ್ತಿ ಇದ್ದುದು ತಿಳಿಯುವುದು.

**ಅಗ್ರಹಾರ:**

ಅಗ್ರಹಾರವೆಂದರೆ ಶ್ರೇಷ್ಠರಾದ ಬ್ರಾಹ್ಮಣರಿಗೆ ಕೊಡಲಾದ ಸ್ಥಳ ಅಥವಾ ಊರು. ಅಗ್ರ ಎಂದರೆ ವಿಪ್ರ ಎಂದರ್ಥ, ಒಟ್ಟಾರೆ ಅಗ್ರಹಾರ ಎಂದರೆ ಬ್ರಾಹ್ಮಣರ ವಾಸಸ್ಥಳ. ಪ್ರಾಚೀನ ಕಾಲದಲ್ಲಿ ಒಂದು ಹಳ್ಳಿಯನ್ನು ಅಗ್ರಹಾರವಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ದತ್ತಿ ನೀಡಲಾಗುತ್ತಿತ್ತು, ಈ ಗ್ರಾಮದಿಂದ ಬಂದ ಎಲ್ಲ ಆದಾಯವನ್ನು ಬ್ರಾಹ್ಮಣರು ಅನುಭವಿಸುತ್ತಿದ್ದರು, ಅಗ್ರಹಾರದಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರು, ವಿದ್ವಾಂಸರು ಮಹಾಜನರು ಎಂದೆನಿಸಿದ್ದಾರೆ. ಕೆಲವೊಮ್ಮೆ ಸಾಸಿರ್ವರು ಎಂದೂ ಸಂಖ್ಯೆಯಲ್ಲಿ ಇವರನ್ನು ಗುರುತಿಸಲಾಗಿದೆ. ಪ್ರಸ್ತುತ ಅಧ್ಯಯನ ಪ್ರದೇಶದ ಅಮ್ಮಿನಭಾವಿ, ಕನಕೂರು, ನರೇಂದ್ರ ಗ್ರಾಮಗಳು ಮಧ್ಯಯುಗೀನ ಕಾಲದಲ್ಲಿ ಪ್ರಮುಖ ಅಗ್ರಹಾರಗಳಾಗಿದ್ದವು.

ಅಮ್ಮಿನಭಾವಿ ಮೊದಲು ಕುಂದೂರು ನಾಡಿನ ಹಣಿಯ ತಿಲಕದಂತಿದ್ದ ಅಗ್ರಹಾರವಾಗಿತ್ತು. ಕುಂದೂರು ಈಗ ಧಾರವಾಡ ತಾಲೂಕಿನಲ್ಲಿರುವ ನರೇಂದ್ರ ಎಂಬ ಊರು. ನರೇಂದ್ರವು ಕ್ರಿ.ಶ. ೧೧೨೫[೪೨]ರಲ್ಲಿ ಫಲವಗ್ರಹಾರ ಎಂದು ಕರೆಯಿಸಿಕೊಂಡಿತ್ತು. ಕ್ರಿ.ಶ.೧೦೭೦ರಲ್ಲಿ ಅಮ್ಮಿನಭಾವಿಯಲ್ಲಿ[೪೩] ೪೦೦ ಮಹಾಜನರಿದ್ದುದು ತಿಳಿದುಬರುತ್ತದೆ. ಆ ಸ್ಥಳವು ೧೧೪೬[೪೪] ಮತ್ತು ೧೧೬೩[೪೫] ರಲ್ಲಿಯೂ ಅಗ್ರಹಾರವಾಗಿತ್ತು.

**ಬ್ರಹ್ಮಪುರಿ:**

ಬ್ರಹ್ಮಪುರಿ ಎಂದರೆ ನಗರಗಳಲ್ಲಿ ಬ್ರಾಹ್ಮಣ ಪಂಡಿತರು ಅಥವಾ ವಿದ್ವಾಂಸರು ವಾಸಿಸುವ ಸ್ಥಳ. ಅಗ್ರಹಾರಗಳು ಊರುಗಳಾದರೆ, ಬ್ರಹ್ಮಪುರಿಗಳು ಪಟ್ಟಣದ ಭಾಗಗಳಾಗಿದ್ದು, ಬ್ರಾಹ್ಮಣರ ವಿದ್ಯಾ ಸಂಪತ್ತಿನಿಂದ ತುಂಬಿದ್ದು, ಇವು ವಿದ್ಯಾಕೇಂದ್ರಗಳಗಿದ್ದವು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಹೆಬ್ಬಳ್ಳಿಯು ಬ್ರಹ್ಮಪುರಿಯಾಗಿದ್ದಿತು.

**ವೀರಗಲ್ಲುಗಳು:**

ವೈರಿಯೊಂದಿಗೆ ಕಾದಾಡಿ ವೀರನೊಬ್ಬ ಮಡಿದಾಗ ಸ್ಮಾರಕವಾಗಿ ನಿಲ್ಲಿಸಿದ ಶಿಲೆಯೇ ವೀರಗಲ್ಲು. ಕಲ್ಮೇಶ್ವರ ದೇವಾಲಯದ ಮುಂದಿದ್ದು ಭವ್ಯವಾದ ವೀರಗಲ್ಲೊಂದು ಅಮ್ಮಿನಭಾವಿ ಗ್ರಾಮದ್ದಾಗಿದ್ದು, ಈಗ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯಲ್ಲಿದೆ. ಈ ವೀರಗಲ್ಲು ಕ್ರಿ.ಶ. ೧೨ನೇ ಶತಮಾನದ್ದಾಗಿದೆ. ಇದರಲ್ಲಿ ಐದು ದೃಶ್ಯಗಳಿವೆ.

ಕೆಳಗಿನ ದೃಶ್ಯದಲ್ಲಿ ಕುದುರೆಯ ಮೇಲೆ ಕುಳಿತಿರುವ ವೀರ, ವೈರಿ ಪಡೆಯವರೂಂದಿಗೆ ಕಾದಾಡುತ್ತಿರುವನು. ವೀರ ಮತ್ತು ಆತನ ಪಡೆಯಲ್ಲಿ ಅಶ್ವದಳದವರಿದ್ದಾರೆ. ಶತ್ರು ಪಡೆಯಲ್ಲಿ ಕಾಲ್ದಳದವರಿದ್ದಾರೆ. ಎರಡೆನಯ ದೃಶ್ಯದಲ್ಲಿಯೂ ಕಾದಾಟದ ವಿವರವಿದೆ. ಕುದುರೆಯ ಮೇಲೆ ಕುಳಿತಿರುವ ವೀರ ತಾನು ಮೇಲೆ ಎತ್ತಿದ ಎರಡು ಕೈಗಳಿಂದ ಉದ್ದನೆಯ ಬಾಣವನ್ನು ಪ್ರಯೋಗಿಸುತ್ತಿರುವನು, ವೀರನ ಕುದುರೆಯ ಕಾಲಲ್ಲಿ ಸಿಕ್ಕಿಬಿದ್ದ ಶವಗಳಿವೆ.

ಮೂರನೆಯ ದೃಶ್ಯದಲ್ಲಿ ಮಡಿದ ವೀರ ವಿಮಾನದ ಮಂಟಪದಲ್ಲಿ ಕುಳಿತಿರುವನು. ಈ ಮಂಟಪವನ್ನು ಚಾಮರಧಾರಿಯರು ಹಿಡಿದಿರುವರು, ಜೊತೆಯಲ್ಲಿ ಕಲಸಗಳನ್ನು ಹೊತ್ತ ಅಪ್ಸರೆಯರಿದ್ದಾರೆ. ಇಕ್ಕೆಲಗಳಲ್ಲಿ ಮತ್ತು ಮೇಲ್ಗಡೆ ನೃತ್ಯ-ವಾದ್ಯ-ಮೇಳದಲ್ಲಿ ಸ್ತ್ರೀಯರು ಇರುವುದು ಗಮನೀಯ.

ನಾಲ್ಕನೆಯ ದೃಶ್ಯದಲ್ಲಿ ವೀರನ ಕೈಗಳನ್ನು ಅಪ್ಸರೆಯರು ತಮ್ಮ ಭುಜದ ಮೇಲೆ ಹಾಕಿಕೊಂಡು ಹಾರುತ್ತಿರುವರು. ಈ ದೃಶ್ಯದಲ್ಲಿ ಒಂದರ ಮೇಲೆ ಒಂದರಂತೆ ಎರಡು ಸಾಲುಗಳಲ್ಲಿ ಚಿತ್ರಗಳಿವೆ. ಕೆಳಗಿನ ಸಾಲಿನಲ್ಲಿ ಸ್ತ್ರೀಯರು ವಾದ್ಯಮೇಳ ಮತ್ತು ಕಲಶಗಳನ್ನು ಹಿಡಿದಿರುವರು. ಮೇಲಿನ ಸಾಲಿನಲ್ಲಿ ಕುದುರೆಯ ಮೇಲೆ ಕುಳಿತ ಸಹಚರರು ಕೈಯಲ್ಲಿ ದೀಪಗಳನ್ನು ಹಿಡಿರುವರು. ಮೇಲೆ ದೇವಲೋಕದ ಚಿತ್ರವಿದೆ. ಅಲ್ಲಿ ಮೂರು ವಿಮಾನಗಳಲ್ಲಿ ಏಳು ಗೂಡುಗಳನ್ನು ತೋರಿಸಲಾಗಿದೆ. ಮಧ್ಯದಲ್ಲಿ ಶಿವಲಿಂಗಕ್ಕೆ ಯತಿ ಪೂಜಿಸುತ್ತಿರುವನು. ಇಕ್ಕೆಲಗಳಲ್ಲಿ ಪುಷ್ಪಗಳು ಅದರ ಬದಿಗಳಲ್ಲಿ ಬ್ರಹ್ಮ ಮತ್ತು ವಿಷ್ಣು ಶಿಲ್ಪಗಳಿವೆ ಕೊನೆಯಲ್ಲಿ

ಬಲಕ್ಕೆ ಮಡಿದ ವೀರ, ಎಡಕ್ಕೆ ಕುಳಿತ ನಂದಿಯಿದೆ. ಈ ದೃಶ್ಯದ ಮೇಲ್ಭಾಗದಲ್ಲಿ ಮಕರ ತೋರಣವಿದೆ. ಈ ವೀರಗಲ್ಲು ಕ್ರಿ.ಶ೧೨೪೩ರಲ್ಲಿ[೪೬] ಅಮ್ಮಿನಭಾವಿಯಲ್ಲಿ ಹಿಟ್ಟೆಯನಾಯಕನು ಮರಣ ಹೊಂದಿದ ವಿವರಣೆ ನೀಡುತ್ತದೆ.

**ನಿಷಿಧಿಗಲ್ಲು:**

ಜೈನ ಶ್ರಾವಕರಾಗಲಿ, ಮುನಿಗಳಾಗಲಿ ಸಲ್ಲೇಖನ ವೃತ ಸ್ವೀಕರಿಸಿ ಮಡಿದುದರ ನೆನಪಿಗಾಗಿ ನಿಲ್ಲಿಸಿದ ಸ್ಮಾರಕ ಶಿಲೆಗಳೇ ನಿಷಿದಿಗಲ್ಲುಗಳು. ಪ್ರಸ್ತುತ ಅಧ್ಯಯನ ಪ್ರದೇಶ ನರೇಂದ್ರ ಒಂದು ನಿಷಿಧಿಯಲ್ಲಿ[೪೭] ಕಾರಯಗಣದ ಕನಕಮುನಿಯು ಸಮಾಧಿಯಾದ ಬಗ್ಗೆ ಪ್ರಸ್ತಾಪವಿದೆ. ಈ ಕನಕಮುನಿಯನ್ನು ನಾಗಚಂದ್ರ ಸಿದ್ಧಾಂತ್ತದೇವನ ಶಿಷ್ಯ ಎನ್ನಲಾಗಿದೆ. ಇದರಿಂದ ಮೊರಬದಲ್ಲಿ ನಾಗಚಂದ್ರ ಸಿದ್ಧಾಂತದೇವ ಸಮಾಧಿಯಾದಾಗ ನಿಷಿಧಿಯನ್ನು ನಿಲ್ಲಿಸಿದ. ಆತನ ಶಿಷ್ಯ ಕನಕಶಕ್ತಿ ಸಿದ್ಧಾಂತದೇವನೇ ನರೇಂದ್ರದಲ್ಲಿ ಮಡಿದ ಕನಕಮುನಿ ಎನ್ನಬಹುದು. ತನ್ನ ಗುರು ನಾಗಚಂದ್ರ ಸಿದ್ಧಾಂತ್ತರು ಸಮಾಧಿ ಮರಣ ಹೊಂದಿದ ಕಾರಣ ಆತನ ಶಿಷ್ಯ ಕನಕಶಕ್ತಿ ಸಿದ್ಧಾಂತ್ತನು ತನ್ನ ಗುರುವಿನ ಮರಣದ ಹಾದಿಯನ್ನೇ ಹಿಡಿದಿದ್ದಾನೆ. ಇದರಿಂದ ಗುರು-ಶಿಷ್ಯರ ಭಾವನಾತ್ಮಕ ಸಂಬಂಧ ಎಷ್ಟೊಂದು ಗಾಢವಾಗಿತ್ತೆಂದು ತಿಳಿಯಬಹುದು. ನರೇಂದ್ರದಲ್ಲಿಯ ಕನಕಮುನಿಯವರ ಸಮಾಧಿ ಕಲ್ಲನ್ನು ನಿಲ್ಲಿಸಿದವನು ಬಾಹುಬಲಿಮುನಿ ಎನ್ನುವದು ಶಾಸನಗಳಿಂದ ತಿಳಿದುಬರುತ್ತದೆ.

**ಧಾರ್ಮಿಕ ವ್ಯೆವಸ್ಥೆ:**

ಭಾರತವು ಪ್ರಾಚೀನ ಕಾಲದಿಂದಲೂ ಹಲವಾರು ಧರ್ಮಗಳನ್ನು ಪೋಷಿಸಿಕೊಂಡು ಬಂದಿದೆ. ಮಾನವನ ಸುಸಂಸ್ಕೃತ ಜೀವನಕ್ಕೆ ಧರ್ಮವೇ ನಿರ್ಣಾಯಕ ಶಕ್ತಿಯಾಗಿದೆ. ಇದು ಸಮಾಜಕ್ಕೆ ಮೂಲಭೂತ ತಳಹದಿಯನ್ನು ಒದಗಿಸಿದೆ. ಪ್ರಾಚೀನ ಕಾಲದಲ್ಲಿ ಕರ್ನಾಟಕವು ಸಹ ವೈದಿಕ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿದ್ದಿತು. ಇದರಿಂದ ಇಲ್ಲಿ ಅನೇಕ ಧರ್ಮಗಳು ತಲೆ ಎತ್ತಿದವು. ಅವುಗಳಲ್ಲಿ ಪ್ರಮುಖವಾದವುಗಳಂದರೆ ಶೈವ, ವೈಷ್ಣವ, ಜೈನ ಮತ್ತು ಬೌದ್ಧಧರ್ಮಗಳು.

ಪ್ರಸ್ತುತ ಅಧ್ಯಯನ ಪ್ರದೇಶದ ಕ್ಷೇತ್ರಕಾರ್ಯ ಹಾಗೂ ಶಿಲಾಶಾಸನಗಳ ಅಧ್ಯಯನದಿಂದ ಈ ಪ್ರದೇಶದಲ್ಲಿ ಅಧಿಕ ಪ್ರಮಾಣದಲ್ಲಿ ಶೈವಧರ್ಮ ಅಸ್ತಿತ್ವದಲ್ಲಿದ್ದುದು ತಿಳಿದುಬರುತ್ತದೆ. ನಂತರದ ಸ್ಥಾನವನ್ನು ಜೈನಧರ್ಮ ಪಡೆದುಕೊಂಡಿದೆ. ವೈಷ್ಣವಧರ್ಮ ಸಾಧಾರಣ ಸ್ಥಿತಿಯಲ್ಲಿದೆ. ಬೌದ್ಧ ಧರ್ಮದ ಕುರಿತು ಶಾಸನಗಳು ಉಲ್ಲೇಖಿಸಿಲ್ಲ, ಅದರೆ ವೀರಶೈವ ಮತ್ತು ಶಾಕ್ತಧರ್ಮಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿರುವುದು ಕಾಣುತ್ತದೆ.

**ಶೈವ ಧರ್ಮ:**

ಶೈವ ಧರ್ಮವು ಭರತಖಂಡದಲ್ಲಿಯೇ ಅತ್ಯಂತ ಪ್ರಾಚೀನ ಧರ್ಮ. ಪ್ರಾಚೀನ ಕರ್ನಾಟಕದಲ್ಲಿ ಬಹು ದೊಡ್ಡ ಧಾರ್ಮಿಕ ಶಕ್ತಿಯಾಗಿ, ಶೈವಧರ್ಮದ ಹಿನ್ನಲೆಯಾಗಿದ್ದು, ಪಾಶುಪತ, ಕಾಳಾಮುಖ ಮುಂತಾದ ಶಾಖೆಗಳನ್ನು ಹೊಂದಿತ್ತು. ಪ್ರಸಿದ್ದ ಮಠ ದೆಗುಲಗಳನ್ನು ನಿರ್ಮಿಸಿದುದಲ್ಲದೆ, ಗುರು ಪರಂಪರೆಯು ಬೆಳೆದುಬಂತು. ಈ ಮತದ ಅನೇಕ ಶಾಸನಗಳು ಧಾರವಾಡ ತಾಲೂಕಿನಲ್ಲಿದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಶೈವ ಧರ್ಮಕ್ಕೆ ಸಂಬಂಧಿಸಿದ ದೇವಾಲಯಗಳಿಗೆ ಇಲ್ಲಿಯ ರಾಜರು, ಸಾಮಂತರು, ದಂಡನಾಯಕರು ದತ್ತಿ ನೀಡಿದ್ದನ್ನು ಕಾಣುತ್ತೇವೆ, ಕ್ರಿ.ಶ. ೧೦೭೧ ರಲ್ಲಿ ಅಮ್ಮಿನಭಾವಿಯ ೪೦೦ ಮಹಾಜನರ ಸನ್ನಿಧಿಯಲ್ಲಿ ಊರದಕ್ಷಿಣಕ್ಕೆ ಕುಂಬೇಶ್ವರ ದೇವಾಲಯವನ್ನು ದೇಹಾರದ ನಾಗಣ್ಣ ನಿರ್ಮಿಸಿ ಅದಕ್ಕೆ ಭೂದತ್ತಿ ನೀಡಿದ್ದಾನೆ.[೪೮] ಇದೇ ಗ್ರಾಮದಲ್ಲಿ ಮೂಲಸ್ಥಾನ ದೇವರಿದ್ದು, ಅದಕ್ಕೆ ಕ್ರಿಶ ೧೧೪೬ರಲ್ಲಿ[೪೯] ಜಗದೇಕಮಲ್ಲ ತ್ರೈಪುರಷನಾದ ಸಂದರ್ಭದಲ್ಲಿ ದಂಡನಾಯಕ ಬಮ್ಮಣ್ಣನು ಗೋಸಹಸ್ರದಾನ, ಪೃಧ್ವಿಧಾನ, ಸಪ್ತಸಾಗರದಾನ ಎಂಬ ಮೂರು ದಾನಗಳನ್ನು ನೀಡಿ ಅಮ್ಮಿನಭಾವಿ ಅಗ್ರಹಾರವನ್ನು ಪುನರ್ದತ್ತಿ ಮಾಡಿ ದಾನ ನೀಡಲಾಯಿತು. ಇದೇ ಸ್ಥಳದ ಮಲ್ಲಿಕಾರ್ಜುನ ದೇವಾಲಯದ ಚೈತ್ರಪವಿತ್ರಕ್ಕೆ ಗಣಪೂಜೆಗಾಗಿ ಆಚಾರ್ಯ ವೀರಭದ್ರ ಗುರುಗಳ ಶಿಷ್ಯ ಅಮೃತರಾಸಿ ಪಂಡಿತರಿಗೆ ಅರ್ಪಿಸಿ ದತ್ತಿ ನೀಡಲಾಗಿದೆ.[೫೦]

ಅಗ್ರಹಾರವಾದ ಅಮ್ಮಿನಭಾವಿ ನಕುಲೀಶರ ಅಶ್ರಯವಾಗಿದ್ದಿತು. ಇಲ್ಲಿಯ ಅಮ್ಮಿನಭಾವಿ ಶಾಸನ[೫೧] ಲಾಕುಳಾಗಮ ಸಿದ್ಧಾಂತ ಪ್ರಸಿದ್ಧರಾದ ಉತ್ತವರಾಸಿ ಪಂಡಿತರ ಸತಿ, ಶೈವ ಮಹಿಳೆ ಚಂದಿಕಬ್ಬೆಯು ಅದಿತ್ಯ ದೇವರ ಸತ್ರಕ್ಕೆ ದಾನ ನೀಡಿದನ್ನು ಹೇಳುತ್ತದೆ.

ಶಂಕರದೇವ ಮತ್ತು ಲಕ್ಷ್ಮಣೇಶ್ವರ ದೇವರನ್ನು ಉಲ್ಲೇಖಿಸುವ ನರೇಂದ್ರದ ಎರಡು ಶಾಸನ[೫೨] ನಕುಲೀಶ ಪಾಶುಪತಕ್ಕೆ ಸಂಬಂಧಪಟ್ಟಿದೆ. ಹೆಬ್ಬಳ್ಳಿಯ ಶಾಸನಗಳೂ ಪಾಶುಪತದ ಸೂಚನೆಯನ್ನೊಳಗೊಂಡಿದೆ. ಹೀಗೆ ಈ ತಾಲೂಕಿನಲ್ಲಿ ಶೈವ ಧರ್ಮವು ಹೆಚ್ಚು ಕಡಿಮೆ ಸರ್ವವ್ಯಾಪಿಸಿದ್ದ ಮತವೆನಿಸುತ್ತವೆ.

**ಮಠಗಳು:**

ಈ ಪ್ರದೇಶದಲ್ಲಿ ಮಠಗಳನ್ನು ಉಲ್ಲೇಖಿಸುವ ಶಾಸನಗಳ ಸಂಖ್ಯೆ ಕಡಿಮೆ. ಕ್ರಿ.ಶ. ೧೦೭೧ರಲ್ಲಿ ಅಮ್ಮಿನಭಾವಿಯಲ್ಲಿ ಎರಡು ಮಠಗಳಿದ್ದವು.[೫೩] ಅಮ್ಮಿನಭಾವಿಯಲ್ಲಿ ಆನೆಯನ್ನೇರಿರುವ ಮಡಿವಾಳ ಮಾಚಿದೇವ ಮೂರ್ತಿಯ ಪಾದ ಪೀಠದ ಮೇಲೆ ಒಂದು

ಶಾಸನವಿದೆ.[೫೪] ಮಡಿವಾಳ ಮಾಚಿದೇವನಿಗೆ ಸಂಬಂಧಿಸಿದ ಪ್ರಾಚೀನ ಶಾಸನ ಇದಾಗಿದೆ. ಆ ಕಾಲಕ್ಕಾಗಲೇ ಮಾಚಿದೇವನನ್ನು ದೇವರ ಸ್ಥಾನಕ್ಕಿದ್ದು ಪೂಜಿಸಲ್ಪಡುತ್ತಿದ್ದರೆಂದು ಇದರಿಂದ ತಿಳಿದು ಬರುತ್ತದೆ.

ಅಮ್ಮಿನಭಾವಿಯಲ್ಲಿ ಪಂಚಗೃಹ ಹಿರೇಮಠ ಇದ್ದು, ಈ ಮಠಕ್ಕೆ ಬಹು ಪುರಾತನವಾದ ಪರಂಪರೆ ಇದ್ದಂತೆ ಕಂಡು ಬರುತ್ತದೆ. ಸುಮಾರು ೫೦೦ ರಿಂದ ೬೦೦ ವರ್ಷಗಳ ಇತಿಹಾಸ ಈ ಮಠಕ್ಕಿದೆ. ಈ ಮಠದ ಮೂಲ ಸ್ಥಾನ ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲೂಕಿನ ಬ್ಯಾಲಹುಣಸೀ ಗ್ರಾಮವಾಗಿದ್ದು, ತುಂಗಭದ್ರಾ ನದಿ ದಂಡೆಗೆ ಅತೀ ಪುರಾತನವಾದ ಮಠವಿದೆ. ಅಲ್ಲಿಯವರು ಇಲ್ಲಿಗೆ ಬಂದು ಈ ಮಠವನ್ನು ಸ್ಥಾಪಿಸಿದಂತೆ ತಿಳಿಯುತ್ತದೆ. ಈ ಮಠದ ಸ್ವಾಧೀನದಲ್ಲಿ ಐದು ಹಳ್ಳಿಗಳಿವೆ. ಅವುಗಳೆಂದರೆ ಮರೇವಾಡ, ಕರಡಿಗುಡ್ಡ, ತಿಮ್ಮಾಪುರ, ಕವಲಗೇರಿ ಹಾಗೂ ಚಂದನಮಟ್ಟಿಗಳಾಗಿವೆ. ಈ ಐದು ಹಳ್ಳಿಗಳಲ್ಲಿಯೂ ಇವರದೇ ಅಧಿಕಾರ ನಡೆಯುತ್ತದೆ. ಅಲ್ಲಲ್ಲಿ ತಮ್ಮ ಮಠದ ಶಾಖಾವತಿಯಿಂದ ಜಂಗಮರನ್ನು ಇಟ್ಟು ಮದುವೆ, ಮುಂಜಿ, ಲಿಂಗಧಾರಣೆ ಇತ್ಯಾದಿ ಕೆಲಸ ಕಾರ್ಯಗಳನ್ನು ಅವರು ಇಂದಿಗೂ ನಿರ್ವಹಿಸುತ್ತಿದ್ದಾರೆ. ಈಗಿರುವ ಹಿರಿಯ ಶ್ರೀಗಳೆಂದರೆ ಶಾಂತಲಿಂಗ ಶಿವಾಚಾರ್ಯ ಮಹಾಸ್ವಾಮಿಗಳಾಗಿದ್ದಾರೆ. ಮೂಲ ಹೆಸರಿನಲ್ಲಿ ಎಂದೂ ಬದಲಾವಣೆ ಮಾಡಿಲ್ಲ. ಈ ಮಠವು ಊರಿನ ಈಶಾನ್ಯ ದಿಕ್ಕಿನಲ್ಲಿ ಪ್ರಶಾಂತ ವಾತಾವರಣದಲ್ಲಿ ನಿರ್ಮಾಣಗೊಂಡಿದೆ. ಇನ್ನೂ ಕೆಲವು ದಾಖಲೆ ಮೂಲಗಳ ಪ್ರಕಾರ ಇದು ೧೦ನೆಯ ಶತಮಾನಕ್ಕಿಂತಲೂ ಮುಂಚೆಯೇ ಇತ್ತೆಂದು ತಿಳಿದು ಬರುತ್ತದೆ. ಈ ಮಠವು ಮುಖ್ಯವಾಗಿ ಮೂರು ಭಾಗಗಳನ್ನು ಹೊಂದಿದೆ, ಒಂದು ಭಾಗವು ಸದರು ಎಂಬ ಮುಖ ಮಂಟಪ ಇದನ್ನು ದರ್ಬಾರಹಾಲ್ ಎಂದು ಕರೆಯುವರು. ಇಲ್ಲಿಂದ ಮುಂದೆ ಸಾಗಿದರೆ ಮಠದ ಹೃದಯ ಭಾಗ, ಅದಕ್ಕೆ ಭಾವಂತಿಗೆ ಎನ್ನುವ ಹೆಸರಿದೆ. ಇದು ನಾಲ್ಕು ದಿಕ್ಕಿಗೂ ಅಖಂಡ ಕಟ್ಟಿಗೆಯಿಂದ ನಿರ್ಮಾಣಗೊಂಡ ಭಾವಂತಿಗೆಯ ಭಾರವನ್ನು ಹೊತ್ತ ಕಂಬಗಳಿವೆ. ಕಟ್ಟಿಗೆಯಲ್ಲಿನ ಕೆತ್ತನೆಯು ಇಲ್ಲಿನ ಮುಖ್ಯವಾದ ಆಕರ್ಷಣೀಯವಾಗಿದೆ. ಅಪೂರ್ವ ತೈಲವರ್ಣದ ಭಿತ್ತಿ ಚಿತ್ರಗಳು ಸಂಗ್ರಹವು ಶ್ರೀಮಠದಲ್ಲಿದೆ. ಇದರ ಮುಂದಿನ ಭಾಗವೇ ಗುರುಮಠವು. ಇದು ಮೂಲ ಗುರುಗಳ ಗದ್ದುಗೆ ಇದೆ. ಈ ಮಠದ ವತಿಯಿಂದ ಪ್ರೌಢಶಾಲೆ ಕನ್ನಡ ಮಾದ್ಯಮದ ಕಾನ್ವೆಂಟ್ ಶಾಲೆಗಳನ್ನು ನಡೆಸುತ್ತಿದ್ದಾರಲ್ಲದೇ ೫೦ ಹುಡುಗರಿಗೆ (ಪ್ರೌಢಶಾಲೆಯ) ಬೋರ್ಡಿಂಗ್ ವ್ಯವಸ್ಥೆಯನ್ನು ನಿರ್ವಹಿಸುತ್ತಾರೆ. ಊರಲ್ಲಿ ಭಕ್ತರು ಭಿನ್ನಾಹ ಮಾಡಿದ ಸಂದರ್ಭಗಳಲ್ಲಿ ಇವರನ್ನು ಪಲ್ಲಕ್ಕಿಯಲ್ಲಿಯೇ ಕೂರಿಸಿಕೊಂಡು ಹೋಗುವ ಒಂದು

ಮರ್ಯಾದೆಯುತವಾದ ಸಂಪ್ರದಾಯ ಈಗಲೂ ಇಲ್ಲಿ ಗಮನಿಸಬಹುದು. ಈ ಪಲ್ಲಕ್ಕಿಯನ್ನು ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರು ಈ ಮಠಕ್ಕೆ ಕಾಣಿಕೆಯಾಗಿ ಕೊಟ್ಟಿದ್ದಾರೆ. ಅಂದರೆ ಸುಮಾರು ೨೦೦ ವರ್ಷಗಳ ಹಿಂದಿನ ಸ್ವಾಮಿಯವರಿಗೆ ಈ ಪಲ್ಲಕ್ಕಿಯನ್ನು ಕೊಟ್ಟಿದ್ದಂತೆ ಸ್ಪಷ್ಟವಾಗಿ ತಿಳಿದುಬರುತ್ತದೆ. ವಂಶಪರಂಪರೆಯಾಗಿ ಮುಂದುವರೆದ ಸ್ವತಂತ್ರ ಮಠವಾಗಿದೆ. ಈ ಮಠಕ್ಕೆ ಇನಾಮು ಜಮೀನುಗಳನ್ನು ದೇಸಾಯಿಯರು ಕೊಟ್ಟಿದ್ದರು. ಈ ಮಠಕ್ಕೆ ಕಾಳಮುಖರಾಜರ ಗುರುಗಳ ಪೀಠ ಎಂತಲೂ ಕರೆಯುತ್ತಾರೆ. ಅನ್ನದಾಸೋಹ ಕಾರ್ಯಕ್ರಮಗಳನ್ನು ಮಠದಿಂದ ನಡೆಸುತ್ತಿದ್ದಂತೆ ತಿಳಿದುಬರುತ್ತದೆ. ಉತ್ತರ ಕರ್ನಾಟಕದ ಪ್ರಮುಖ ಅಗ್ರಹಾರ ಅಮ್ಮಿನಭಾವಿ ಗ್ರಾಮವಾಗಿದೆ.

ನರೇಂದ್ರದಲ್ಲಿ ಶ್ರೀಮಹಾಂತ ಶಿವಯೋಗಿಗಳ ಒಂದು ಮಠವಿದೆ. ಐತಿಹಾಸಿಕ ಕಾಲದಲ್ಲಿ ನರೇಂದ್ರಕ್ಕೆ ಕುಂದೂರು ನಂದಪುರ ಎಂಬ ಹೆಸರುಗಳಿದ್ದವು, ಶ್ರೀಮಹಾಂತ ಶಿವಯೋಗಿಗಳು ಪವಾಡ ಪುರಷರಾಗಿ ಭಕ್ತರ ದು:ಖ-ದುಮ್ಮಾನ ದೂರಮಾಡಿ ಸರ್ವರ ಅಭಿಮಾನಕ್ಕೆ ಭಕ್ತಿ ಗೌರವಕ್ಕೆ ಕಾರಣರಾಗಿದ್ದಾರೆ. ಹೀಗೆ ಸಮಾಜಕ್ಕೆ ಪಂಚಗೃಹ ಹಿರೇಮಠವು ನಾನಾರೀತಿಯಲ್ಲಿ ಧಾರ್ಮಿಕ, ಶೈಕ್ಷಣಿಕ ರಂಗಗಳಿಗೆ ತನ್ನದೇ ಆದ ಕೊಡುಗೆಯನ್ನು ಸಲ್ಲಿಸುತ್ತಿದೆ. ಅಲ್ಲದೆ ಹೆಬ್ಬಳ್ಳಿಯಲ್ಲಿ[೫೫] ಶಿವಾನಂದಮಠ, ಸಿದ್ಧಾರೂಢಸ್ವಾಮಿಮಠ, ಚಿಕ್ಕಮಠ, ಹೂಲಿಮಠ, ಬ್ರಹ್ಮಚೈತನ್ಯ ಮಠಗಳಿವೆ.

**ವೈಷ್ಣವ ಧರ್ಮ:**

ಪ್ರಾಚೀನ ಧರ್ಮಗಳಲ್ಲಿ ವೈಷ್ಣವ ಧರ್ಮವು ಒಂದಾಗಿದೆ. ಈ ಧರ್ಮದಲ್ಲಿ ವಿಷ್ಣುವಿಗೆ ಪ್ರಥಮಸ್ಥಾವಿದೆ. ಕರ್ನಾಟಕವನ್ನು ಆಳಿದ ಅನೇಕ ರಾಜಮನೆತನಗಳು ವೈಷ್ಣವ ಧರ್ಮಾವಲಂಬಿಗಳಾಗಿದ್ದರು, ಬಾದಾಮಿ ಚಾಲುಕ್ಕರ ದೊರೆಯಾದ ಮಂಗಳೇಶನು ಬಾದಮಿಯಲ್ಲಿ ಸುಪ್ರಸಿದ್ದ ವೈಷ್ಣವ ಗುಹಾಂತರ ದೇವಾಲಯವನ್ನು ಕೊರೆಸಿದನು. ಇದರಿಂದ ಕ್ರಿ.ಶ. ೭ನೇ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ವೈಷ್ಣವ ಧರ್ಮ ಪ್ರಮುಖವಾದಗಿತ್ತು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ವೈಷ್ಣವ ಧರ್ಮದ ಪ್ರಚಲಿತವಿದ್ದ ಬಗ್ಗೆ ಕಂಡುಬಂದಿಲ್ಲ. ಆದರೆ ಧಾರವಾಡ ಜಿಲ್ಲೆಯ ಸುತ್ತಮುತ್ತಲಿನ ಕೆಲವು ಪ್ರದೇಶಗಳಲ್ಲಿ ವೈಷ್ಣವ ಧರ್ಮವು ಪ್ರಚಲಿತವಿದ್ದರ ಬಗ್ಗೆ ಉಲ್ಲೇಖಗಳಿವೆ.

**ಜೈನಧರ್ಮ:**

'ಜಿನನಿಂದ' ಜೈನಧರ್ಮ ಹುಟ್ಟಿಕೊಂಡಿತು. ಜಿನ ಅಥವಾ ಜಿನೇಶ್ವರ ಎಂದರೆ 'ಕರ್ಮಗಳನ್ನ ಜಯಿಸಿದವನು' ಎಂದಥವಾಗುತ್ತದೆ. ಅವರಿಂದ ಉಪದೇಶಿಸಲ್ಪಟ್ಟ ಧರ್ಮವೆ

ಜೈನಧರ್ಮ ಕ್ರಿಪೂ ೩ನೇ ಶತಮಾನದಲ್ಲಿಯೇ ದಕ್ಷಿಣ ಭಾರತದಲ್ಲಿ ಜೈ... ಪ್ರಚಲಿತದಲ್ಲಿತ್ತು. ಮೌರ್ಯ ವಂಶದ ಚಕ್ರವರ್ತಿ ಚಂದ್ರಗುಪ್ತ ಮತ್ತು ಅವನ ಗುರು ಭದ್ರಭಾಹು ಹನ್ನೆರಡು ಸಾವಿರ ಜಿನ ಮುನಿಗಳೊಂದಿಗೆ ಶ್ರವಣಬೆಳಗೊಳಕ್ಕೆ ಬಂದು ನೆಲೆಸಿದರು. ಅಂದಿನ ಕರ್ನಾಟಕವನ್ನಾಳಿದ ರಾಜಮನೆತನಗಳಿಂದ ಇದು ರಾಜಾಶ್ರಯ ಪೆಡೆದುಕೊಂಡಿತು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಅಮ್ಮಿನಭಾವಿ ಮತ್ತು ನರೇಂದ್ರಗಳಲ್ಲಿ ಜೈನಧರ್ಮವು ಪ್ರಚಲಿತವಿದ್ದ ಬಗ್ಗೆ ಶಾಸನಗಳ ಆಧಾರವಿದೆ. ಅಮ್ಮಿನಭಾವಿಯಲ್ಲಿ ೧೨ನೆಯ ಶತಮಾನದ ಚಂದ್ರನಾಥ ತೀರ್ಥಂಕರನ ಪಾದಪೀಠಶಾಸನ ಹಾಗೂ ಕ್ರಿಶ. ೧೮೯೨ರ ನೇಮಿನಾಥ ತೀರ್ಥಂಕರನ ಪಾದಪೀಠ ಶಾಸನ[೫೬]ಗಳು ಪ್ರಾಚೀನತೆಯ ಬಗ್ಗೆ ಉಲೇಖಿಸುತ್ತದೆ.

ನರೇಂದ್ರದ ೫ ಶಾಸನಗಳಲ್ಲಿ[೫೭] ಜೈನಧರ್ಮಕ್ಕೆ ಸಂಬಂಧಪಟ್ಟ ಉಲ್ಲೇಖಗಳಿವೆ. ನಾಗಚಂದ್ರ ಮುನಿಯ ಶಿಷ್ಯನಾದ ಕಾರೆಯಗಣದ ಕನಕಶಾಂತಿ ಮುನಿಯ ಸಮಾಧಿಮರಣವನ್ನು ಉಲ್ಲೇಖಿಸುತ್ತ 'ನಿಶಿಧಿಕಾಶಿಳಾಸ್ತಂಭ' ವನಶಿಷ್ಯ ಬಾಹುಬಲಿ ಮುನಿನಾಥನು ನಿಲ್ಲಿಸಿದನೆಂದು ಸಾರುತ್ತದೆ. ಹೆಬ್ಬಳ್ಳಿಯ ಶಾಸನ[೫೮] ಯಾಪನೀಯ ಸಂಘ ಪುನ್ನಾಗವೃಕ್ಷ ಮೂಲಗಣದ ಉಲ್ಲೇಖಮಾಡುತ್ತದೆ.[೫೯] ಹೆಬ್ಬಳ್ಳಿ ಈ ಪ್ರದೇಶದಲ್ಲಿ ಶೈವಧರ್ಮ, ವೈಷ್ಣವ ಧರ್ಮ, ಜೈನಧರ್ಮಗಳು ಇಂದಿಗೂ ಪ್ರಚಲಿತದಲ್ಲಿದೆ.

**ಆರ್ಥಿಕ ವ್ಯವಸ್ಥೆ:**

ಒಂದು ಪ್ರದೇಶದ ಪ್ರಗತಿಯು ಅಲ್ಲಿನ ಅರ್ಥವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಆ ಪ್ರದೇಶದ ಆರ್ಥಿಕವಾಗಿ ಸಂಪದ್ಭರಿತವಾದಾಗ ಮಾತ್ರ ಸಮೃದ್ಧ ಸ್ವಾಭಿಮಾನದ ಬದುಕನ್ನು ನಡೆಸಿ ಸಮಗ್ರ ಸಂಸ್ಥೆಯನ್ನು ಉತ್ತಮಗೊಳಿಸುವುದು ಸಾಧ್ಯವಾಗುತ್ತದೆ. ಪ್ರಸ್ತುತ ಅಧ್ಯಯನದ ಪರಿಸರವು ಆರ್ಥಿಕ ವ್ಯವಸ್ಥೆಯ ದೃಷ್ಟಿಯಿಂದ ಸಮೃದ್ಧತೆ ಹೊಂದಿದೆ. ಕೃಷಿಯು ಪ್ರಧಾನವಾಗಿ ಕಂಡುಬರುವುದರಿಂದ ವ್ಯವಸಾಯ ಇಲ್ಲಿನ ಜನರ ಮುಖ್ಯವಾದ ವೃತ್ತಿಯಾಗಿದೆ. ಈ ಪ್ರದೇಶವು ನೈಸರ್ಗಿಕವಾಗಿಯೂ ಉತ್ತಮವಾಗಿದೆ, ಇಲ್ಲಿನ ಮಣ್ಣು, ನೀರು, ಖನಿಜ ಸಂಪತ್ತು ಮತ್ತು ಅರಣ್ಯ ಸಂಪತ್ತುಗಳು ಆರ್ಥಿಕವಾಗಿ ಸಬಲರಾಗಲೂ ಸಹಾಯಕವಾಗಿವೆ, ಇಲ್ಲಿನ ಜನರ ಉದ್ಯೋಗ, ವ್ಯಾಪಾರ, ಸಂಘ, ಸಂಸ್ಥೆಗಳು, ಸಂಪರ್ಕವ್ಯವಸ್ಥೆ ಮುಂತಾದ ಅಧ್ಯಯನಗಳಿಂದ ಆರ್ಥಿಕ ಪರಿಸ್ಥಿತಿಯ ಅಧ್ಯಯನಕ್ಕೆ ಮೂಲಾಧಾರವನ್ನು ಒದಗಿಸಿಕೊಟ್ಟಿದೆ.

**ಮಣ್ಣು ಮತ್ತು ಕೃಷಿ:**

ಅಮ್ಮಿನಭಾವಿ ಪರಿಸರವು ಮುಖ್ಯವಾಗಿ ವಿವಿಧ ಪ್ರಕಾರದ ವಿಭಜಿತ ಶಿಲಾಮಿಶ್ರಣದಿಂದ ಕೂಡಿರುವುದು ಕಂಡುಬರುತ್ತದೆ. ಕಪ್ಪುಮಣ್ಣು, ಕೆಂಪುಮಣ್ಣು, ಮಸಾರಿಮಣ್ಣು, ಮಡಿಕಟ್ಟು, ರೇವೆಮಣ್ಣು ಈ ಪರಿಸರದಲ್ಲಿ ಕಂಡುಬರುತ್ತದೆ. ಬಯಲು ಪ್ರದೇಶದಲ್ಲಿ ಮತ್ತು ಗುಡ್ಡದ ಮೇಲೆ ಮರಳು ಮತ್ತು ಕಪ್ಪುಮಣ್ಣಿನ ಗುಡ್ಡಗಳನ್ನು ಕಾಣುತ್ತೇವೆ.

ಅಮ್ಮಿನಭಾವಿಯ ಪ್ರಾಚೀನ ಕಾಲದಿಂದಲೂ ವ್ಯವಸಾಯದಲ್ಲಿ ಪ್ರಾಮುಖ್ಯತೆಯನ್ನು ಹೊಂದಿದೆ. ಇಲ್ಲಿನ ಜನರ ಮುಖ್ಯವೃತ್ತಿ ವ್ಯವಸಾಯ ಪ್ರಮುಖವಾಗಿ ಕಂಡುಬರುತ್ತದೆ. ಹಾಗೂ ಅದೇ ಅವರ ಜೀವನ ನಿರ್ವಹಣೆಗೆ ಮೂಲಾಧಾರವಾಗಿದೆ. ವ್ಯವಸಾಯದಲ್ಲಿ ಒಣಬೇಸಾಯ ಮತ್ತು ನೀರಾವರಿ ಪದ್ದತಿಗಳನ್ನು ಅನುಸರಿಸಲಾಗುತ್ತಿತ್ತು. ಭೂಮಿಯನ್ನು ದತ್ತಿ ನೀಡುವುದು ಶ್ರೇಷ್ಠ ಎಂದು ಭಾವಿಸಲಾಗಿತ್ತು. ದತ್ತಿಗಳನ್ನು ತಿಳಿಸುವ ಶಾಸನಗಳಲ್ಲಿ ಭೂಧಾನಗಳನ್ನು ತಿಳಿಸುವ ಶಾಸಗಳೇ ಹೆಚ್ಚಿನ ಪ್ರಮಾಣದಲ್ಲಿವೆ.

ಪಶ್ಚಿಮ ಕರಾವಳಿಯಿಂದ ಬೀಸುವ ಮುಂಗಾರು ಮಾರುತಗಳು ಇಲ್ಲಿನ ವ್ಯವಸಾಯಕ್ಕೆ ಹೆಚ್ಚು ಅನುಕೂಲಕರವಾಗಿದೆ. ಕೃಷಿ ವಿಧಾನದಲ್ಲಿ ಜನರು ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿಕೊಂಡು ಬರುತ್ತಿರುವುದನ್ನು ಕಾಣಬಹುದಾಗಿದೆ. ಕೃಷಿಕಾರ್ಯದಲ್ಲಿ ವೈಜ್ಞಾನಿಕ ಸಲಕರಣಿಗಳನ್ನು ಬಳಸುತ್ತಿರುವುದು ಹಾಗೂ ಹೈಬ್ರಿಡ್ ತಳಿಗಳ ಬೀಜಗಳ ಉಪಯೋಗದಿಂದ ಇಲ್ಲಿನ ವ್ಯವಸಾಯವು ಹಸಿರು ಕ್ರಾಂತಿಯ ದ್ಯೋತಕವಾಗಿ ಕಂಡುಬರುತ್ತದೆ.

ಇಲ್ಲಿನ ಪರಿಸರವು ಕೃಷಿಯೊಂದಿಗೆ ಕೃಷಿಯೇತರ ಚಟುವಟಿಕೆಗಳಿಗೂ ಸಹ ಅಷ್ಟೇ ಮಹತ್ವದ ಸ್ಥಾನವನ್ನು ಒದಗಿಸಿಕೊಟ್ಟಿದೆ. ಅಂದರೆ ಸುತ್ತಮುತ್ತಲಿನ ಕೈಗಾರಿಕೆಗಳು ಈ ಪರಿಸರದ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ.

**ವರ್ತಕರ ಸಂಘಗಳು:**

ಈ ಪರಿಸರ ಕೃಷಿಯೊಂದಿಗೆ ವ್ಯಾಪಾರವು ಸಹ ಒಂದು ವೃತ್ತಿಯಾಗಿ ಬೆಳೆದು ಬಂದಿತ್ತು. ಅವುಗಳಲ್ಲಿ ಮುಖ್ಯವಾಗಿ ವರ್ತಕರ ಸಂಘಗಳು, ವಿನಿಮಯ ವರ್ತಕರು ಹಾಗೂ ಉತ್ಪಾದಕ ವಿನಿಮಯ ವರ್ತಕರಿದ್ದರು. ವಸ್ತುವಿನಿಮಯ ಹಾಗೂ ಕೆಲವೊಂದು ವಸ್ತುಗಳನ್ನು ಉತ್ಪಾದಿಸಿ ವಿನಿಮಯ ಮಾಡುವ ಸಂಘಗಳಿದ್ದವು.

ವಿನಿಮಯ ವರ್ತಕರು ವ್ಯಾಪಾರವನ್ನು ಮಾಡುವವರು. ಅವರಲ್ಲಿ ಶೆಟ್ಟಿ ಬಣಜಿಗರು, ನಕರ ಎಂಬುವವರಿದ್ದು, ಶೆಟ್ಟಿಬಣಜಿಗರು ತಮ್ಮ ವ್ಯಾಪಾರದ ಸರಕುಗಳನ್ನು ಎತ್ತು, ಕತ್ತೆ,

ಕೋಣಗಳ ಮೇಲೆ ಹೇರಿಕೊಂಡು ಸಂತೆಯಲ್ಲಿ ಮಾರಾಟ ಮಾಡುವವರು.[೬೦] ನಕರ ಎಂಬುವವರು, ಅಂಗಡಿ ವ್ಯಾಪಾರಿಗಳು ಇವರು ಹೆಚ್ಚಾಗಿ ಪಟ್ಟಣಗಳಲ್ಲಿ ವಾಸಿಸುವವರು, ಇವರು ಸಂತೆಗಳಿಗೆ ಹೋಗಿ ಸರಕುಗಳನ್ನು ಖರೀದಿಸಿ ಬಯಲು ಅಂಗಡಿ ಮಳಿಗೆಗಳಲ್ಲಿಟ್ಟುಕೊಂಡು ಮಾರಾಟ ಮಾಡುತ್ತಿದ್ದರು.[೬೧] ಅಮ್ಮಿನಭಾವಿಯಲ್ಲಿ ನಕರಿದ್ದುದು ಕ್ರಿ.ಶ. ೧೧೧೨ ಮತ್ತು ೧೧೪೬ರ ಶಾಸನಗಳಲ್ಲಿ[೬೨] ಕಂಡು ಬರುತ್ತದೆ. ಕಾಣಬಹುದು, ಕೆಲವೊಂದು ಪ್ರಮುಖ ವೃತ್ತಿಯರು ಮಾತ್ರ ಸಂಘಗಳನ್ನು ನಿಯೋಜಿಸಿಕೊಂಡರು ಸಂಘಗಳನ್ನು ಉತ್ಪಾದಕ ಸಂಘ ಮತ್ತು ವಿನಿಮಯ ಸಂಘ ಎಂದು ವರ್ಗೀಕರಿಸಲಾಗಿದೆ.

**ವಿನಿಮಯ ಸಂಘ:**

ಒಂದು ವೃತ್ತಿಯಿಂದ ಬದುಕು ನಡೆಸುತ್ತಿರುವ ಹಾಗೂ ಅದೇ ಹೆಸರಿನಿಂದ ಸಂಘಗಳನ್ನು ರಚಿಸಿಕೊಂಡು ವ್ಯಾಪಾರವನ್ನು ಮಾಡುವವರು ಈ ಸಂಘಕ್ಕೆ ಸೇರಿಕೊಳ್ಳುವರು. ಅವರಲ್ಲಿ ಅಯ್ಯವೊಳೆ ಐನೂರು (೫೦೦ ವರ್ತಕರ ಸಂಘ), ತಂಬುರಿಗ ಸಾಸಿರ್ವರು ಈ ಸಂಘಕ್ಕೆ ಸೇರಿಕೊಳ್ಳುತ್ತಾರೆ.

ಈ ಅಯ್ಯವೊಳೆ ಐನೂರ್ವರು ಎಂಬುದು ೫೦೦ ಸದಸ್ಯರನ್ನೊಳಗೊಂಡ ವರ್ತಕರ ಸಂಘ. ಅಯ್ಯವೊಳೆ ಎಂಬುದು ಸಂಘದ ಸ್ಥಳ. ಇವರನ್ನು ಕೆಲವು ಕೆಡೆ ಐನೂರ್ವರೆಂದೇ ಉಲ್ಲೇಖಿಸಲಾಗಿದೆ.[೬೩] ಕ್ರಿ.ಶ ೧೧೨೩ ರಲ್ಲಿ ನರೇಂದ್ರ ಶಾಸನದಲ್ಲಿ ಪನ್ನಿರ್ಚ್ಛಾಸಿರದ ನಾಲ್ಕು ಪುಟ್ಟನಾಡ ಅಯ್ಯಾರ್ವರು ಎಂಬ ಉಲ್ಲೇಖವಿದೆ. ಪ್ರಾಯಶಃ ಅವರು ಹನ್ನೆರಡು ಸಾವಿರದ ಹಳ್ಳಿಗಳ ಒಂದು ನಾಡಿನಲ್ಲಿ, ನಾಲ್ಕು ಪಟ್ಟಣದ ಮಹಾಜನರಾಗಿರಬಹುದೆ ಎಂದು ಸಂಶಯ ವ್ಯಕ್ತಪಡಿಸಲಾಗಿದೆ.

**ಉತ್ಪಾದಕ ವಿನಿಮಯ ಸಂಘ:**

ಈ ರೀತಿಯ ಸಂಘಗಳು ಸಮಾಜದಲ್ಲಿ ಒಂದು ಸ್ಥಾನಮಾನವನ್ನು ಉಳಿಸಿಕೊಳ್ಳಲೂ ರಚನೆಯಾದವು, ಉತ್ಪಾದಕ ವಿನಿಮಯ ವೃತ್ತಿಯವರು ರಚಿಸಿಕೊಂಡು ಸಂಘಟನೆಗಳಲ್ಲಿ ತೆಲ್ಲಿಗರೈವತ್ತಕ್ಕಲು, ತೊಂಡಿಗರೈನೂರ್ವರು ಕುರುಂಬುಸೇಣಿ, ಕುಂಬಾರದೋಕ್ಕಾಲರು ಸೇರಿಕೊಳ್ಳುತ್ತಾರೆ.

**ತೆಲ್ಲಿಗರು:**

ಉತ್ಪಾದಕ ವಿನಿಮಯ ಸಂಘ ರಚಿಸಿಕೊಂಡವರಲ್ಲಿ ತೆಲ್ಲಿಗರು ಪ್ರಮುಖರಾಗಿದ್ದಾರೆ. ಇವರು ತಮ್ಮ ವೃತ್ತಿಯನ್ನಾಗಿ ಗಾಣದಿಂದ ಎಣ್ಣೆಯನ್ನು ಉತ್ಪಾದಿಸುವುದು ಇವರ ಕಾರ್ಯ. ಈ ರೀತಿಯ ಸಂಘಗಳು ಪ್ರತಿಯೊಂದು ಪಟ್ಟಣಗಳಲ್ಲಿ ಈ ವೃತ್ತಿಬಾಂಧವರು ಇದ್ದರು.

ಅಮ್ಮಿನಭಾವಿ ಪ್ರದೇಶದಲ್ಲಿ ಈ ವೃತ್ತಿಯವರು ಶೈವ, ಜೈನ ಬಸದಿಗಳಿಗೆ, ಶಾಕ್ತದೇವರಿಗೆ ಹಾಗೂ ದೇವಾಲಯಗಳಿಗೆ ಎಣ್ಣೆಯ ದಾನ ಬಿಟ್ಟ ಮಾಹಿತಿಯು ಶಾಸನಗಳಿಂದ ತಿಳಿದು ಬರುತ್ತದೆ.

**ಕುಂಬಾರರು:**

ಉತ್ಪಾದಕ ವಿನಿಮಯ ಸಂಘಗಳಲ್ಲಿ ಒಂದಾದ ಕುಂಬಾರರು ಗ್ರಾಮ ಮತ್ತು ಪಟ್ಟಣಗಳಲ್ಲಿ ವಾಸ ಮಾಡುತ್ತಿದ್ದರು. ಇವರ ಮುಖ್ಯ ವೃತ್ತಿ ಮಣ್ಣಿನ ಗಡಿಗೆ-ಮಡಕೆಗಳನ್ನು ಉತ್ಪಾದಿಸುವುದು. ನರೇಂದ್ರ ಪ್ರದೇಶದಲ್ಲಿ ಕ್ರಿ.ಶ. ೧೧೨೫[೬೩]ರಲ್ಲಿ ಕುಂಬಾರರು, ಕುಂಬಾರದೊಕ್ಕಲು ಅಂತದ್ದೊಂದು ಕೇರಿ ನರೇಂದ್ರದಲ್ಲಿತ್ತು.

**ಇತರೆ ಸಂಘಗಳು:**

**ಅರವತ್ತೂಕ್ಕಲು:**

ಇವರು ಒಕ್ಕಲಿಗ ಅಥವಾ ರೈತ ವೃತ್ತಿ ಬಾಂಧವರು. ಪ್ರಸ್ತುತ ಅಮ್ಮಿನಭಾವಿ ಪ್ರದೇಶದ ಶಾಸನಗಳಲ್ಲಿ ಅರುವತ್ತೊಕ್ಕಲು ಮತ್ತು ಮೂವತ್ತೂಕ್ಕಲುಗಳ ಉಲ್ಲೇಖ ಕಾಣಬರುತ್ತದೆ. ಶಾಸನಗಳಲ್ಲಿ ಉಲ್ಲೇಖಿತವಾಗುವ ಅನೇಕ ಸಂಘ ಸಂಸ್ಥೆಗಳಲ್ಲಿ ಮೇಲಿಂದ ಮೇಲೆ ಬರುವ ಸಂಘವೆಂದರೆ ಅರುವತ್ತೂಕ್ಕಲು. ಇದು ಗ್ರಾಮದಲ್ಲಿ ಒಕ್ಕಲುತನ ಮಾಡುವ ರೈತರ ಸಂಘ. ಇವರು ತಮ್ಮ ಕಾರ್ಯ ಸೌಕರ್ಯ, ಸಾಮಾಜಿಕ ಸ್ಥಾನಮಾನ ಸ್ವಹಿತ ಸಂರಕ್ಷಣೆ ಮುಂತಾದವುಗಳಿಗಾಗಿ ತಮ್ಮದೇ ಆದ ಒಂದು ಪ್ರತ್ಯೇಕ ಸಂಘವನ್ನು ಊರೊಳಗೆ ಕಟ್ಟಿಕೊಂಡಿದ್ದರು. ಈ ಸಂಘದ ಸದಸ್ಯರ ಸಂಖ್ಯೆ ಸಾಂಪ್ರದಾಯಿಕವಾಗಿ ಅರುವತ್ತೆಂದು ಪರಿಗಣಿಸಲ್ಪಟ್ಟಿತ್ತು. ಗ್ರಾಮದಲ್ಲಿ ಒಕ್ಕಲುತನ ಮಾಡುವವರ ಸಂಖ್ಯೆ ಏನೇ ಇದ್ದರು ಅದರಿಂದ ರಚಿಸಲ್ಪಟ್ಟ ಈ ಸಂಘಕ್ಕೆ ಅರುವತ್ತೂಕ್ಕಲು ಎಂದೆ ಹೆಸರು.[೬೪] ಗ್ರಾಮಗಳಲ್ಲಿ ಕಾಯಿಪಲ್ಲೆ ಬೆಳೆಸುವ ರೈತರು ಈ ಅರುವತ್ತೊಕ್ಕಲು ಸಂಘದಲ್ಲಿ ಸಮಾವೇಶವಾಗುತ್ತಿದ್ದರು. ಇವರಿಗೆ ಬಾಡಸರೊಕ್ಕೆಲು ಎಂದು ಹೆಸರು. ಅಮ್ಮಿನಭಾವಿಯ ಶಾಸನವೊಂದರಲ್ಲಿ 'ಬಾಡಸರೂಕ್ಕಲು ಮುಖ್ಯವಾಗಿ ಅರುವತ್ತೂಕ್ಕಲು' ಎಂದು ಉಲ್ಲೇಖಬರುತ್ತದೆ.[೬೫] 'ಬಾಸನದೇವಣ್ಣ' ಎಂಬಯೊಬ್ಬನ ಕಾಯಿಪಲ್ಲೆ ತೋಟದವನ ಹೆಸರು ಈ ಶಾಸನದಲ್ಲಿ ಬರುತ್ತದೆ. ಅರವತ್ತೂಕ್ಕಲಿನ ಸಂಘಟಕರು ಸ್ವತಂತ್ರವಾಗಿ ಕೆಲವು ಕಡೆ ಗಾವುಂಡರೊಡನೆ ಸೇರಿ ದೇವರಿಗೆ ದತ್ತಿ ನೀಡಿದ್ದಾರೆ. ಇವರು ಹೊಂದಿದ್ದ ಹೊಲದಲ್ಲಿ ದೇವರನ್ನು ಪ್ರತಿಷ್ಠಾಪನೆ ಮಾಡುತ್ತಿದ್ದರೆಂದು ಅಮ್ಮಿನಭಾವಿಯ ಒಂದು ಶಾಸನ[೬೬]ದಿಂದ ತಿಳಿದುಬರುತ್ತದೆ. ಇವರು ತಮ್ಮ ಒಕ್ಕಲಲ್ಲಿಯ ಧಾನ್ಯಗಳನ್ನು ದತ್ತಿಯಾಗಿ ನೀಡಿದ್ದಾರೆ.

ಈ ಮೇಲಿನ ಎಲ್ಲ ಶಾಸನಗಳನ್ನು ಗಮನಿಸಿದಾಗ ಅರುವತ್ತೊಕ್ಕಲರು ಶೈವ ಧರ್ಮಕ್ಕೆ ದತ್ತಿ ನೀಡಿದರೆಂದು ತಿಳಿದು ಬರುತ್ತದೆ. ಇದರಲ್ಲಿ ಅಮ್ಮಿನಭಾವಿಯ ಮಲ್ಲಿಕಾರ್ಜುನ ದೇವಾಲಯದ ಉಲ್ಲೇಖ ಕಂಡುಬರುತ್ತದೆ. ಇವರು ದೇವಾಲಯದ ಜೀರ್ಣೋದ್ಧಾರ ಹಾಗೂ ದತ್ತಿ ನೀಡಿದ್ದು ತಿಳಿದು ಬರುತ್ತದೆ.

**ಸೇಣಿಗ:**

ಸೇಣಿಗ ಎಂಬವರು ಶ್ರೇಣಿಗಳಾಗಿರಬೇಕು. ಸ್ಥಳೀಯ ವರ್ತಕರು ಅಥವಾ ಅಧಿಕಾರಿಗಳಾಗಿರಬಹುದು. ಇವರ ಬಗ್ಗೆ ಅಮ್ಮಿನಭಾವಿ ಗ್ರಾಮದ ಶಾಸನ[೧೭]ದಲ್ಲಿ ಕಾಣಬರುತ್ತಾರೆ. ಇಲ್ಲಿ ಇವರ ಸಂಘಟನೆಯಿದ್ದಂತೆ ತಿಳಿದುಬರುತ್ತದೆ.

**ಅಳತೆ ಮಾಪನಗಳು:**

ಅಳತೆ ಮಾಪನಗಳ ಬಗ್ಗೆ ಅಮ್ಮಿನಭಾವಿ ಪ್ರದೇಶದಲ್ಲಿ ಜಾರಿಯಲ್ಲಿಯದ್ದರ ಬಗ್ಗೆ ಅಲ್ಲಿನ ಶಾಸನಗಳಿಂದ ತಿಳಿದು ಬರುತ್ತದೆ. ಭೂಮಿ ಅಥವಾ ಹೊಲಗದ್ದೆಗಳನ್ನು ಅಳತೆ ಮಾಡಲು ಮತ್ತುರು, ಕೆಯ್ಯಿ, ಕಮ್ಮ ಇತ್ಯಾದಿಗಳನ್ನು ಮಾಪನಗಳಾಗಿ ಒಳಸಲಾಗುತ್ತಿತ್ತು. ಈ ಪ್ರದೇಶದಲ್ಲಿ ಸುಮಾರು ಮೂವತ್ತು ಸ್ಥಳಗಳಲ್ಲಿಯ ಭೂಮಿಯನ್ನು ಮತ್ತರಿನಿಂದ ಅಳತೆ ಮಾಡುವ ಪರಿಪಾಠವಿರುವದು ಕಂಡುಬರುತ್ತದೆ.[೧೮] ಕಮ್ಮ ಎಂದರೆ ಕಂಬ ಎಂದು ಅರ್ಥೈಸಲಾಗುತ್ತದೆ. ಅದರೆ ಅಳತೆ ಮಾಪನ ಕಮ್ಮವನ್ನು ಹೆಚ್ಚಾಗಿ ಕರಿಯ ಅಥವಾ ನೀರಾವರಿ ಗದ್ದೆಯ ಭೂಮಿಯನ್ನು ಅಳತೆ ಮಾಡಲು ಬಳಸಿದಂತೆ ಕಾಣ ಬರುತ್ತದೆ.

ಸಾಗುವಳಿ ಗದ್ದೆ ಅಥವಾ ಹೊಲವನ್ನು ಅಳತೆ ಮಾಡುವುದನ್ನು ಕೆಯ್ಯಿ ಎಂದು ಅರ್ಥೈಸುವರು. ಕೆಲವು ಪ್ರದೇಶಗಳಲ್ಲಿ ಮತ್ತರು, ಕೆಯ್ಯಿ ಭೂಮಾಪನ ಬಳಸಲಾಗಿದೆ. ಉದಾಹರಣಿಗೆ ನರೇಂದ್ರದ ಶಾಸನಗಳು ಮತ್ತರು, ಕೆಯ್ಯಿ ಬಳಕೆಯನ್ನು ತಿಳಿಸುತ್ತದೆ. ಮತ್ತರು, ಕೆಯ್ಯಿ ಮತ್ತು ಕಂಬವನ್ನು ಭೂಮಾಪನಕ್ಕೆ ಬಳಸಿದ್ದು, ನರೇಂದ್ರ ಶಾಸನದಿಂದ[೧೯] ತಿಳಿಯುತ್ತೇವೆ, ಇದರಿಂದ ಕಂಬವನ್ನು ಭೂಮಾಪನಕ್ಕೆ ಬಳಸುತ್ತಿದ್ದರೆಂದು ಹೇಳಬಹುದಾಗಿದೆ. ಈ ಕಂಬದ ಬಳಕೆ ಕೇವಲ ಅಮ್ಮಿನಭಾವಿ ಪರಿಸರದಲ್ಲಿ ಒಂದು ಸ್ಥಳದಲ್ಲಿ ಬಳಸಿದ್ದು ಮಾತ್ರ ಕಂಡುಬರುವುದರಿಂದ ಈ ಸ್ಥಳ ಆ ಕಾಲದಲ್ಲಿ ಪ್ರಮುಖ ಸಾಂಸ್ಕೃತಿಕ ಕೇಂದ್ರಗಳಾಗಿದ್ದವೆಂದು ತರ್ಕಿಸಬಹುದಾಗಿದೆ.

ಈ ಪ್ರದೇಶದಲ್ಲಿ ನಾಲ್ಕುನೂರು (೪೦೦) ಕಂಬ ಪ್ರಮಾಣದ ಭೂಮಿಯನ್ನು ದತ್ತಿ ನೀಡಿದ್ದು ಕಾಣುವುದು. ಕೆಯ್ಯಿ, ಕೈ, ಅಗಲ, ನೀಳವನ್ನು ರಾಜಹಸ್ತದಲ್ಲಿ ಅಳತೆ ಮಾಡುವ ವಿಧಾನ ಈ ಭಾಗದಲ್ಲಿದ್ದಿತು. ಇದರ ಬಗ್ಗೆ ನರೇಂದ್ರ ಶಾಸನವು[೨೦] ತಿಳಿಯಪಡಿಸುತ್ತದೆ.

ರಾಜಹಸ್ತ ಅಳತೆ ಮಾಪನ ಏಕೆ ಆರಂಭವಾಯಿತು. ಎಂಬುದು ಮಾತ್ರ ತಿಳಿದಿಲ್ಲ. ಕೆಲವು ಕಡೆ ಗ್ರಾಮ ಮತ್ತು ಪಟ್ಟಣಗಳ ನಾಮಾಂಕಿತವುಳ್ಳ ಅಳತೆ ಕೋಲುಗಳಿದ್ದ ಬಗ್ಗೆ ತಿಳಿದುಬರುತ್ತವೆ. ಉದಾಹರಣೆಗೆ ನರೇಂದ್ರದಲ್ಲಿ ಕುಂದೂರು ಕೋಲುಗಳ[೭೧] ಬಳಕೆ ಇದ್ದುದ್ದು ಈ ಪ್ರದೇಶದ ಶಾಸನಗಳಿಂದ ತಿಳಿಯುತ್ತದೆ. ಕೆಲವು ಕಡೆ ಕುಂದೂರುಗಳೇ ಬಳಕೆಯಲ್ಲಿತ್ತು. ಮನೆ ಅಥವಾ ನಿವೇಶನವನ್ನು ಅಳತೆ ಮಾಡಲು ನಿರ್ದಿಷ್ಟ ಪಡಿಸಿದ ಕೈ, ಅಗಲ. ನೀಳಹಸ್ತದ ಬಳಕೆಯಿತ್ತು. ನರೇಂದ್ರ ಶಾಸನದಲ್ಲಿ[೭೨] ರಾಜಹಸ್ತದಲ್ಲಿ ೩೦ ಕೆಯ್ಯಿ, ನೀಳ ೧೧, ಕೈ, ಅಗಲ ಮನೆ-೨, ರಾಜಹಸ್ತದಲ್ಲಿ ೩೫ ಅಗಲ ಮತ್ತು ನೀಳಹಸ್ತ ೧೯೫ ವೆಂದು ಉಲ್ಲೇಖಿವಾಗಿದೆ.

**ಧಾನ್ಯಗಳ ಅಳತೆ:**

ಧಾನ್ಯಗಳನ್ನು ಮಾಪನಗಳಲ್ಲಿ ಅಳತೆ ಮಾಡುವ ರೂಢಿಯಿತ್ತು ತುಂಬಿದ ಬಂಡಿ ಭತ್ತಕ್ಕೆ ಬಂಡಿ ಭತ್ತವೆನ್ನಲಾಗುತ್ತಿತ್ತು  ಅದೇ ರೀತಿಯಾಗಿ ಭತ್ತದ ೬ ಚೀಲ ಧಾನ್ಯಗಳ ಪ್ರಮಾಣಕ್ಕೆ ಒಂದು ಖಂಡುಗ ಎಂದು ಕರೆಯಲಾಗುತ್ತಿತ್ತು. ಖಂಡುಗದ ಉಲ್ಲೇಖ ನಮಗೆ ಕಂಡುಬರುವುದಿಲ್ಲ, ನರೇಂದ್ರದ ಶಾಸನದಲ್ಲಿ[೭೩] ಅಕ್ಕಿ ೫ ಬಳ್ಳ ಮಾಗದ ಉಲ್ಲೇಖವಿದೆ. ಕೊಳಗದ ಉಲ್ಲೇಖ ಅಮ್ಮಿನಭಾವಿಯ ಶಾಸನಗಳಲ್ಲಿದೆ.[೭೪] ಹಾಗಾಗಿ ಈ ಶಾಸನದಲ್ಲಿ ಕ್ರಮವಾಗಿ ಕೊಳಗಭತ್ತ ಮತ್ತು ಕೊಳಗ ಅಕ್ಕಿಯ ಉಲ್ಲೇಖವಿದ್ದ ಬಗ್ಗೆ ಕಂಡುಬರುತ್ತದೆ.

**ನಾಣ್ಯಗಳು:**

ವ್ಯಾಪಾರ ವಹಿವಾಟಿನಲ್ಲಿ ನಾಣ್ಯಗಳ ಪಾತ್ರ ಮುಖ್ಯವಾಗಿತ್ತು, ಬಳಕೆಯಲ್ಲಿದ್ದ ನಾಣ್ಯಗಳೆಂದರೆ ಗದ್ಯಾಣ, ಪಣ, ಹಾಗ, ಪಾಗ, ಬೇಳೆ. ಕಾಣಿ ಮುಂತಾದವುಗಳಾಗಿವೆ. ಈ ನಾಣ್ಯಗಳು ಚಿನ್ನ, ಬೆಳ್ಳಿ, ಲೋಹ ಇತರೆ ವಸ್ತುಗಳಿಂದ ತಯಾರಸಲ್ಪಡುತ್ತಿದ್ದವು. ವ್ಯಾಪಾರದಲ್ಲಿ ಮೊದಲು ವಸ್ತುವಿನಿಮಯ ಪದ್ದತಿ ರೂಢಿಯಲ್ಲಿದ್ದಿತು ನಂತರ ಆ ಸ್ಥಾನದಲ್ಲಿ ನಾಣ್ಯಗಳ ಚಲಾವಣೆ ಪ್ರಾರಂಭವಾಯಿತು.

ಅಮ್ಮಿನಭಾವಿ ಪರಿಸರದಲ್ಲಿ ಗದ್ಯಾಗ, ಪಣ, ಹಾಗ, ಚಿನ್ನ, ಹೊನ್ನು ಹಣ-ಬೆಳೆ, ಕಾಣಿ ಮುಂತಾದ ನಾಣ್ಯಗಳ ಬಳಕೆಯಲ್ಲಿದ್ದ ಬಗ್ಗೆ ಉಲ್ಲೇಖಗಳು ಕಂಡುಬರುತ್ತವೆ. ಗದ್ಯಾಣದ ಬಗ್ಗೆ ನರೇಂದ್ರದ[೭೫] ಶಾಸನ ಉಲ್ಲೇಖಿಸುತ್ತದೆ. ಹಾಗ ಮತ್ತು ಪಣಗಳು ಒಂದೇ ಅರ್ಥವನ್ನು ಹೊಂದಿದೆ, ಅಮ್ಮಿನಭಾವಿ[೭೬] ಶಾಸನಗಳಲ್ಲಿ ಪಾಗ ಎಂಬ ನಾಣ್ಯದ ಉಲ್ಲೇಖ ಬರುತ್ತವೆ. ಕ್ರಿ.ಶ. ೧೧೪೬ರ ಅಮ್ಮಿನಭಾವಿ[೭೭] ಶಾಸನದಲ್ಲಿ ಚಿನ್ನದ ಉಲ್ಲೇಖ ಕಂಡುಬರುತ್ತದೆ. ನಾಣ್ಯ ಅಥವಾ ಹಣವನ್ನು ದೇವರಿಗೆ ದತ್ತಿಯಾಗಿ ಉಲ್ಲೇಖಗಳು ನಮಗೆ ಅಲ್ಲಲ್ಲಿ ಸಿಗುತ್ತದೆ.

**ಅಡಿಟಿಪ್ಪಣೆಗಳು:**

---

೧ ಜೋಶಿ ಆರ್. ವಿ., ಪ್ಲಿಸ್ಟೋಸಿನ್ ಸ್ಟಡೀಸ್ ಇನ್ ದ ಮಲಪ್ರಭಾ ಬೇಸಿನ್ ಪುಟ-೫
೨ ಐ.ಎ.ಆರ್., ೧೯೯೬-೯೭, ಪುಟ-೨೮
೩ ಬಿ. ನರಸಿಂಹಯ್ಯ ಅವರ ವರದಿ
೪ ಧಾ.ಜಿ.ಗೇ., ಪುಟ ೫೨.
೫ ಧಾ.ಜಿ.ದೇ.ಕೋ., ಪುಟ ೧೪.
೬ ಧಾ.ಜಿ.ಗೇ., ಪುಟ ೫೨.
೭ ಅದೇ ಪುಟ.
೮ ಶಿವತಾರಕ ಕೆ.ಬಿ., ಕರ್ನಾಟಕದ ಪುರಾತತ್ವ ನೆಲೆಗಳು ೨೦೦೧, ಪುಟ ೩೪೮-೩೪೯.
೯ ಸೌ.ಇ.ಇ. XI-ii-೧೨೧, ಅಮ್ಮಿನಭಾವಿ, ಕ್ರಿ.ಶ. ೧೦೭೧-೭೨, ಪುಟ-೧.
೧೦ ಸೌ.ಇ.ಇ. XI-ii-೧೫೪, ಧಾರವಾಡ ತಾಲೂಕಿನ ಶಾಸನಗಳು, ಅಮ್ಮಿನಭಾವಿ, ಪುಟ ೨೬.
೧೧ ಇ.ಐ. XIII, ೨೮ಬಿ, ನರೇಂದ್ರ, ಕ್ರಿ.ಶ. ೧೧೨೩
೧೨ ಇ.ಐ. XII, ೨೮ಎ, ನರೇಂದ್ರ, ಕ್ರಿ.ಶ. ೧೧೨೫
೧೩ ಸೌ.ಇ.ಇ. XV-೩೧, ಅಮ್ಮಿನಭಾವಿ, ಕ್ರಿ.ಶ.೧೧೪೬
೧೪ ಧಾ.ತಾ.ಶಾ., ೬೪, ಹೆಬ್ಬಳ್ಳಿ, ಕ್ರಿ.ಶ. ೧೨೪೪
೧೫ ಧಾ.ತಾ.ಶಾ., ೬೫, ಹೆಬ್ಬಳ್ಳಿ, ಕ್ರಿ.ಶ. ೧೨೪೮
೧೬ ಕ.ಐ.-VI, ೬೮, ಧಾರವಾಡ, ಕ್ರಿ.ಶ. ೧೪೪೮
೧೭ ಧಾ.ಜಿ.ಗೇ., ಪುಟ ೯೪.
೧೮ ಸೌ.ಇ.ಇ. XV-೨೫೭, ಅಮ್ಮಿನಭಾವಿ, ಕ್ರಿ.ಶ.೧೫೪೭
೧೯ ಇ.ಐ. XIII, ಪು-೨೯೮, ನರೇಂದ್ರ, ಕ್ರಿ.ಶ. ೧೧೨೫
೨೦ ಅದೇ ಪುಟ
೨೧ ದ ಕದಂಬಾಸ ಆಫ್ ಗೋವಾ ಕುದಲಿ ಕ್ರಿ.ಶ. ೧೦೫೦
೨೨ ಸೌ.ಇ.ಇ. XI-ii-೧೨೧, ಅಮ್ಮಿನಭಾವಿ, ಕ್ರಿ.ಶ. ೧೦೭೧
೨೩ ಇ.ಐ. XII, ೨೮, ಎ, ನರೇಂದ್ರ, ಕ್ರಿ.ಶ. ೧೧೨೫
೨೪ ಎಸ್. ಐ. XI, ೩೧, ಅಮ್ಮಿನಭಾವಿ, ಕ್ರಿ.ಶ. ೧೧೪೬
೨೫ ಸೌ.ಇ.ಇ. XX-೪೬, ಗುಡಗೇರಿ, ಕ್ರಿ.ಶ. ೧೦೭೨
೨೬ ಇ.ಐ. XIII, ೨೮ ಬಿ, ನರೇಂದ್ರ, ಕ್ರಿ.ಶ. ೧೧೨೩
೨೭ ಅದೇ ೨೮ಎ, ನರೇಂದ್ರ, ಕ್ರಿ.ಶ. ೧೧೨೫
೨೮ ಸೌ.ಇ.ಇ. XV-೨೨೮, ಅಮ್ಮಿನಭಾವಿ, ಕ್ರಿ.ಶ. ೧೦೬೩
೨೯ ಸೌ.ಇ.ಇ. XI-ii, ೧೫೪, ಕನಕೂರು, ಕ್ರಿ.ಶ. ೧೧೦೪
೩೦ ಇ.ಐ. II ೨೮ ಬಿ, ನರೇಂದ್ರ, ಕ್ರಿ.ಶ. ೧೧೨೮
೩೧ ಇ.ಐ. XIII, ೨೮ ಬಿ, ನರೇಂದ್ರ, ಕ್ರಿ.ಶ. ೧೧೨೩
೩೨ ಅದೇ ಪುಟ.
೩೩ ಅದೇ ಪುಟ.

೩೪ ಅದೇ ಪುಟ.
೩೫ ಅದೇ ಪುಟ.
೩೬ ಅದೇ ಪುಟ
೩೭ ಸೌ.ಇ.ಇ. XI-ii, ೧೫೪, ಕನಕೂರು, ಕ್ರಿ.ಶ. ೧೧೦೪
೩೮ ಧಾ.ಜಿ.ಸು.ನಂ.೬೫, ಹೆಬ್ಬಳ್ಳಿ, ಕ್ರಿ.ಶ. ೧೧೦೪
೩೯ ಇ.ಐ. XIII, ೨೮ ಬಿ, ನರೇಂದ್ರ, ಕ್ರಿ.ಶ. ೧೧೨೩, ೧೧೨೫, ೧೧೨೬
೪೦ ಇ.ಐ. XIII, ೨೯೮, ನರೇಂದ್ರ, ಕ್ರಿ.ಶ. ೧೧೨೮
೪೧ ಸೌ.ಇ.ಇ. XI-ii, ಅಮ್ಮಿನಭಾವಿ, ಕ್ರಿ.ಶ. ೧೧೧೨
೪೨ ಇ.ಐ. XIII, ೨೮ ಎ, ನರೇಂದ್ರ, ಕ್ರಿ.ಶ. ೧೧೨೫
೪೩ ಅದೇ ಪುಟ.
೪೪ ಅದೇ ಪುಟ.
೪೫ ಧಾರವಾಡ ತಾಲೂಕಿನ ಶಾಸನಗಳು, ಅಮ್ಮಿನಭಾವಿ, ಪುಟ ೧೬.
೪೬ ಸೌ.ಇ.ಇ. XV, ೨೩೧, ಅಮ್ಮಿನಭಾವಿ, ಕ್ರಿ.ಶ. ೧೨೪೩
೪೭ ನರೇಂದ್ರ ಸು.ಶ. ೧೨
೪೮ ಸೌ.ಇ.ಇ. XI, ೧೨೧, ಅಮ್ಮಿನಭಾವಿ, ಕ್ರಿ.ಶ. ೧೦೭೧, ೧೦೭೨
೪೯ ಸೌ.ಇ.ಇ. XV, ೩೧, ಅಮ್ಮಿನಭಾವಿ, ಕ್ರಿ.ಶ. ೧೦೪೬
೫೦ ಸೌ.ಇ.ಇ. XI, ೧೯೧, ಅಮ್ಮಿನಭಾವಿ, ಕ್ರಿ.ಶ. ೧೦೭೧, ೧೧೧೨
೫೧ ಇ.ಐ. XIII, ಪು. ೩೧೬, ನರೇಂದ್ರ, ಕ್ರಿ.ಶ. ೧೧೨೩, ೧೧೨೫, ೧೧೨೬
೫೨ ಇ.ಐ. XIII, ೨೯೮ ಎ, ನರೇಂದ್ರ, ಕ್ರಿ.ಶ. ೧೧೨೫
೫೩ ಸೌ.ಇ.ಇ. XI-ii, ೧೨೪, ಅಮ್ಮಿನಭಾವಿ, ಕ್ರಿ.ಶ. ೧೦೭೧, ೧೦೭೨
೫೪ ಧಾ.ಜಿ.ಸೂ., ನಂ.೮, ಅಮ್ಮಿನಭಾವಿ, ಕ್ರಿ.ಶ. ೧೨೮೪
೫೫ ಕೃಷ್ಣಾಜಿ ಗು. ನಾಡಿಗೀರ, ೧೯೯೪–೧೯೪೫, (ಎಂ.ಎ. ಅಂತಿಮ ವರ್ಷದ ಪ್ರಬಂಧ) ಧಾರವಾಡ ತಾಲೂಕ ಮಧ್ಯಭಾಗದ ಶಿಲ್ಪಕಲಾ ಇತಿಹಾಸ ಸಮೀಕ್ಷೆ, ಪುಟ–೮೬.
೫೬ ಧಾ.ಜಿ.ಸೂ., ನಂ.೮, ಅಮ್ಮಿನಭಾವಿ, ಕ್ರಿ.ಶ. ೧೨೮೪
೫೭ ಧಾ.ಜಿ.ಸೂ., ನರೇಂದ್ರ, ಸು.ಶ. ೧೨
೫೮ ಧಾ.ಜಿ.ಸೂ., ನಂ.೬೬, ಹೆಬ್ಬಳ್ಳಿ, ಸು.ಶ. ೧೩
೫೯ ಹಿರೇಮಠ ಬಿ.ಆರ್. ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪುಟ–೩೪
೬೦ ಸೌ.ಇ.ಇ. XV-ii, ೧೯೧, ಅಮ್ಮಿನಭಾವಿ, ಕ್ರಿ.ಶ. ೧೧೧೨
೬೧ ಸೌ.ಇ.ಇ. XV, ೩೧, ಅಮ್ಮಿನಭಾವಿ, ಕ್ರಿ.ಶ. ೧೧೪೬
೬೨ ಹಿರೇಮಠ ಬಿ.ಆರ್. ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪುಟ–೭೨
೬೩ ಇ.ಐ. XIII, ೨೮ ಎ, ನರೇಂದ್ರ, ಕ್ರಿ.ಶ. ೧೧೨೫
೬೪ ಕರ್ನಾಟಕ ಭಾರತಿ ತಂಟ–೮, ೧೯೭೫–೭೬, ಪುಟ–೭೭
೬೫ ಸೌ.ಇ.ಇ. XI, p-II; No.೧೯೧, ೩–೨೪೯, ಅಮ್ಮಿನಭಾವಿ, ಕ್ರಿ.ಶ. ೧೧೧೨
೬೬ ಅದೇ ಪುಟ
೬೭ ಅದೇ ಪುಟ
೬೮ ಸೌ.ಇ.ಇ. XI, ೨೮೮, ಅಮ್ಮಿನಭಾವಿ, ಕ್ರಿ.ಶ. ೧೧೬೩

೬೯ ಇ.ಐ. XIII, ೨೮ ಬಿ, ನರೇಂದ್ರ, ಕ್ರಿ.ಶ. ೧೧೨೫
೭೦ ಅದೇ ಪುಟ
೭೧ ಅದೇ ಪುಟ
೭೨ ಅದೇ ಪುಟ
೭೩ ಅದೇ ಪುಟ
೭೪ ಸೌ.ಇ.ಇ. XI, ೧೨೧, ಅಮ್ಮಿನಭಾವಿ, ಕ್ರಿ.ಶ. ೧೦೭೧-೭೨
೭೫ ಧಾ.ತಾ.ಶಾ., ನರೇಂದ್ರ, ಕ್ರಿ.ಶ. ೧೧೨೭
೭೬ ಸೌ.ಇ.ಇ. XV, ೩೧, ಅಮ್ಮಿನಭಾವಿ, ಕ್ರಿ.ಶ. ೧೧೪೬
೭೭ ಅದೇ ಪುಟ

# ಅಧ್ಯಾಯ – ನಾಲ್ಕು
# ವಾಸ್ತು ಮತ್ತು ಮೂರ್ತಿಶಿಲ್ಪ

ಧಾರವಾಡ ಜಿಲ್ಲೆಯು ಪ್ರಾಚೀನ ಕಾಲದಿಂದಲೂ ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿದೆ. ವಿವಿಧ ರಾಜಮನೆತನಗಳು ಈ ಪ್ರದೇಶದಲ್ಲಿ ತಮ್ಮ ಕೇಂದ್ರಗಳನ್ನು ಸ್ಥಾಪಿಸಿದ್ದವು. ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಶೈಕ್ಷಣಿಕ ಕೇಂದ್ರಗಳು ಇಲ್ಲಿ ಅಭಿವೃದ್ಧಿ ಹೊಂದಿದವು. ಈ ಎಲ್ಲ ಅಂಶಗಳಿಂದ ಜಿಲ್ಲೆಯಲ್ಲಿ ವಾಸ್ತು ಮತ್ತು ಮೂರ್ತಿಶಿಲ್ಪಗಳ ದೃಷ್ಟಿಯಿಂದ ದೇವಾಲಯಗಳ ನಿರ್ಮಾಣ ಕಂಡುಬರುತ್ತದೆ.

**ವಾಸ್ತುಶಿಲ್ಪ:**

ಧಾರವಾಡ ಜಿಲ್ಲೆಯ ಅಮ್ಮಿನಭಾವಿ ಪ್ರದೇಶವು ಕರ್ನಾಟಕ ಸಂಸ್ಕೃತಿಯ ಹೃದಯ ಭಾಗವಿದ್ದಂತೆ, ಜೈನ, ಶೈವ, ವೈಷ್ಣವ, ಶಾಕ್ತ, ವೀರಶೈವ, ಇಸ್ಲಾಂ ಧರ್ಮ ಪಂಥಗಳಿಗೆ ಸಂಬಂಧಿಸಿದ ಸ್ಮಾರಕಗಳನ್ನು ಒಳಗೊಂಡಿದೆ. ಹಲವು ಸ್ಮಾರಕಗಳು ಗುರುತಿಸಲಾರದಷ್ಟು ನವೀಕರಣಗೊಂಡಿವೆ. ಈ ಪ್ರದೇಶದಲ್ಲಿ ಬಾದಾಮಿ ಚಾಲುಕ್ಯರ ಸ್ಮಾರಕಗಳು ಕಂಡುಬಂದಿಲ್ಲ. ರಾಷ್ಟ್ರಕೂಟರ ಕಾಲದಲ್ಲಿ ದೇವಾಲಯ, ಅಗ್ರಹಾರ ಕೆರೆಗಳ ನಿರ್ಮಾಣವನ್ನು ಮತ್ತು ದಾನದತ್ತಿಗಳನ್ನು ಪ್ರಸ್ತಾಪಿಸುತ್ತದೆ.[೧] ಎಸ್. ರಾಜಶೇಖರ ಅವರು ಕರ್ನಾಟಕದಲ್ಲಿನ ರಾಷ್ಟ್ರಕೂಟರ ದೇವಾಲಯಗಳನ್ನು ಕುರಿತು ಆಳವಾಗಿ ಅಧ್ಯಯನ ನಡೆಸಿದ್ದಾರೆ.[೨] ಆದರೆ ಅಮ್ಮಿನಭಾವಿ ಪರಿಸರದಲ್ಲಿ ರಾಷ್ಟ್ರಕೂಟರ ದೇವಾಲಯಗಳ ಸಂಖ್ಯೆ ವಿರಳವಾಗಿ ಕಂಡುಬರುತ್ತವೆ. ನಂತರ ಬಂದ ಕಲ್ಯಾಣದ ಚಾಲುಕ್ಯರು ಕರ್ನಾಟಕದಲ್ಲಿ ದೇವಾಲಯಗಳ ಸಂಸ್ಕೃತಿಯನ್ನೇ ಹುಟ್ಟುಹಾಕಿದರು.

ಇವರ ಸಾಮಂತರಾಗಿ ಈ ಪ್ರದೇಶವನ್ನಾಳಿದ ಗೋವೆಯ ಕದಂಬರು ದೇವಾಲಯಗಳನ್ನು ನಿರ್ಮಿಸಿ ದಾನ–ದತ್ತಿಯನ್ನು ನೀಡಿದರು. ಕಲ್ಯಾಣ ಚಾಲುಕ್ಯರ ಅರಸರು, ರಾಣಿಯರು, ಮಂತ್ರಿಗಳು, ದಂಡನಾಯಕರು, ಸಾಮಂತರು, ಮಾಂಡಳಿಕರು, ಅಧಿಕಾರಿಗಳು ಮತ್ತು ವರ್ತಕರು ದೇವಾಲಯಗಳನ್ನು ನಿರ್ಮಿಸಿ ದಾನ–ದತ್ತಿಗಳನ್ನು ನೀಡಿದ ನೆನಪಿಗೆ ಅಸಂಖ್ಯಾತ ಶಾಸನಗಳನ್ನು ಹಾಕಿಸಿದರು. ಇವರು ರಾಜಕೀಯ, ಆಡಳಿತಕ್ಕೆ ಭದ್ರವಾದ ಬುನಾದಿ ಹಾಕಿದ ಫಲವಾಗಿ ಸಾಂಸ್ಕೃತಿಕ ಕ್ಷೇತ್ರದಲ್ಲಿ ಗಣನೀಯ ಸಾಧನೆ ಮಾಡಲು ಸಾಧ್ಯವಾಯಿತು. ದೇವಾಲಯಗಳು ಮತ್ತು ಬಸದಿಗಳು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಾಣಗೊಂಡವು. ಇವರ ಆರಂಭಕಾಲದ ಕೆಲವು ದೇವಾಲಯಗಳು ರಾಷ್ಟ್ರಕೂಟರ ಕಾಲದ ವಾಸ್ತುಲಕ್ಷಣಗಳನ್ನು ಹೊಂದಿವೆ. ಈ ಪ್ರದೇಶದಲ್ಲಿ ರಾಷ್ಟ್ರಕೂಟರಿಂದ ಆರಂಭಗೊಂಡ ಸಾಂಸ್ಕೃತಿಕ ಪರಂಪರೆಯು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಶ್ರೀಮಂತಗೊಂಡು ಹೊಯ್ಸಳ, ಸೇವುಣ ಮತ್ತು ವಿಜಯನಗರ ಕಾಲದವರೆಗೆ ಮುಂದುವರಿದಿದ್ದನ್ನು ಕಾಣಬಹುದಾಗಿದೆ. ಹೀಗೆ ಆಳ್ವಿಕೆಯನ್ನು ಮಾಡಿದ ಅನೇಕ ರಾಜಮನೆತನದ ದೊರೆಗಳು ಸಾಮ್ರಾಜ್ಯ ವಿಸ್ತರಣೆಯ ಜೊತೆಗೆ ಕಲೆ ಮತ್ತು ವಾಸ್ತುಶಿಲ್ಪಕ್ಕೂ ಮಹತ್ವದ ಕೊಡುಗೆಯನ್ನು ನೀಡಿದ್ದು ಕಂಡುಬರುತ್ತದೆ.

**ದೇವಾಲಯಗಳು:**

ದೇವಾಲಯಗಳ ಅಧ್ಯಯನವು ಚರಿತ್ರೆಯ ರಚನೆಯಲ್ಲಿ ಬಹುಮುಖ್ಯ ಪುರಾತತ್ವ ಆಕರಗಳಾಗಿ ಕಂಡುಬರುತ್ತವೆ. ಕಳೆದು ಹೋದ ಗತವನ್ನು ಪುನಃ ಕಟ್ಟುವ ಬಹುಮುಖ್ಯ ಸಂಪತ್ತು. ದೇವಾಲಯಗಳು ಮಾನವನ ಧಾರ್ಮಿಕ ಶ್ರದ್ದೆ, ಭಕ್ತಿ ಮತ್ತು ನಂಬಿಕೆಗಳ ಪ್ರತೀಕವಾಗಿ ಬೆಳೆದು ಬಂದಿವೆ. ದೇವಾಲಯದ ಅಧ್ಯಯನದಿಂದ ಆಯಾ ಪ್ರದೇಶದ ಚರಿತ್ರೆಯಲ್ಲಿ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ವಿಚಾರಗಳನ್ನು ಗುರುತಿಸುವದು ಹಾಗೂ ಅವುಗಳನ್ನು ವಿಶ್ಲೇಷಿಸುವುದು ಸಾಧ್ಯವಾಗುತ್ತದೆ.

**ಅಮ್ಮಿನಭಾವಿ:**

ಸಂಖ್ಯೆ : ೧

ಸ್ಥಳ : ಅಮ್ಮಿನಭಾವಿ

ಸ್ಮಾರಕ : ಕಲ್ಮೇಶ್ವರ ದೇವಾಲಯ

ಸ್ಥಳ ನಿರ್ದೇಶನ : ಊರ ನಡುವೆ

ಅಭಿಮುಖ : ಪೂರ್ವಾಭಿಮುಖ

ಕಾಲಮಾನ : ಕ್ರಿ. ಶ. ೧೨ ರಿಂದ ೧೩ನೆಯ ಶತಮಾನ

ಶೈಲಿ : ಕಲ್ಯಾಣ ಚಾಲುಕ್ಯ

**ಸ್ಮಾರಕದ ವಿವರ:**

ಕಲ್ಮೇಶ್ವರ ದೇವಾಲಯವು ಕ್ರಿ.ಶ. ೧೯೯೧ರಲ್ಲಿ ಜೀರ್ಣೋದ್ಧಾರಗೊಂಡಿದೆ. ದೇವಾಲಯವು ಅದಿಷ್ಠಾನದ ಮೇಲಿದ್ದು, ಹೊರೆಗೋಡೆಯನ್ನು ಕಲ್ಲು ಮತ್ತು ಸಿಮೆಂಟಿನಿಂದ ಕಟ್ಟಲ್ಪಟ್ಟಿದೆ. ಇದರ ಆವರಣದಲ್ಲಿರುವ ವೀರಗಲ್ಲು ಕ್ರಿ.ಶ. ೧೨೪೩ರ ಗೋವೆಯ ಕದಂಬ ತ್ರಿಭುವನಮಲ್ಲನ ಆಳ್ವಿಕೆಗೆ ಸೇರಿದೆ. ತ್ರಿಭುವನಮಲ್ಲನ ಮಹಾಪಸಾಯತನಾದ ಮಾಯಿನಾಯಕನ ವೀರಮರಣವನ್ನು ಉಲ್ಲೇಖಿಸುವುದು.[೩] ಈ ವೀರಗಲ್ಲು, ಸದ್ಯ ಕರ್ನಾಟಕ ವಿಶ್ವವಿದ್ಯಾಲಯದ ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗದಲ್ಲಿದೆ.

ನೇಮಿನಾಥ ಬಸದಿಯ ಮೇಲ್ಭಾವಣಿಯಲ್ಲಿ ಕ್ರಿ.ಶ. ೧೦೭೧-೭೨[೪] ಮತ್ತು ಬಸದಿಯ ಮುಂದಿನ ಕಟ್ಟೆಯ ಹತ್ತಿರ ಬಿದ್ದಿರುವ ಕ್ರಿ.ಶ. ೧೧೪೬[೫]ರ ಶಾಸನ ಕ್ರಮವಾಗಿ ಅಮ್ಮಯ್ಯ ಬಾವಿಯ ಶಿವಾಲಯವನ್ನು ಮತ್ತು ಸ್ವಯಂಭು ಮೂಲಸ್ತಾನ ದೇವರನ್ನು ಉಲ್ಲೇಖಿಸುತ್ತವೆ.[೬]

ಪೂರ್ವಾಭಿಮುಖವಾಗಿರುವ ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ತೆರೆದ ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದ ಮಧ್ಯ ಶಿವಲಿಂಗವಿದೆ. ಲಿಂಗವು ಸ್ವಲ್ಪ ಭಾಗಿರುವುದು ವಿಶೇಷವಾಗಿದೆ. ಗರ್ಭಗೃಹದ ದ್ವಾರದ ಫಲಕದಲ್ಲಿ ದ್ರಾವಿಡ ಶಿಖರಗಳನ್ನು ಉಬ್ಬುಶಿಲ್ಪಗಳಲ್ಲಿ ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲುವಾಡದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ.

ಅಂತರಾಳ ದ್ವಾರದ ಫಲಕದಲ್ಲಿ ಮಕರ ತೋರಣದ ಅಲಂಕಾರವುಂಟು. ಬಾಗಿಲು ವಾಡಗಳಲ್ಲಿ ಅರ್ಧಕಂಬ ಮತ್ತು ಲತಾಬಳ್ಳಿಗಳ ರಚನೆಯನ್ನು ಕಾಣಬಹುದು. ಅಂತರಾಳದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಇಕ್ಕೆಲಗಳಲ್ಲಿ ಜಾಲಂಧ್ರಗಳಿವೆ. ಅಂತರಾಳದ ಭುವನೇಶ್ವರಿ ಅಷ್ಟಕೋನಾಕೃತಿಯಲ್ಲಿದ್ದು, ೪ ಮೂಲೆಗಂಬಗಳಿಂದ ಆವೃತ್ತವಾಗಿದೆ.

ಈ ದೇವಾಲಯವು ತೆರೆದ ಸಭಾಮಂಟಪವನ್ನು ಹೊಂದಿದೆ. ಇದನ್ನು ಕ್ರಿ.ಶ. ೧೯೯೧ರಲ್ಲಿ ಜೀರ್ಣೋದ್ಧಾರಗೊಳಿಸಲಾಗಿದೆ. ಆದರೂ ಎಡದಿಕ್ಕಿನ ಮಂಟಪ ಕುಸಿದು ಹೋಗಿದೆ. ಸಭಾಮಂಟಪದ ಎಡ ಬಲಗಳಲ್ಲಿ ಎರಡು ಕೋಷ್ಠಕಗಳಿವೆ. ಎಡಕ್ಕೆ ವಿಷ್ಣು ಶಿಲ್ಪ ಇದ್ದರೆ, ಬಲಕ್ಕೆ ಭೈರವ ಶಿಲ್ಪವಿದೆ. ಸಭಾಮಂಟಪದ ಮುಂಭಾಗದ ಗೋಡೆಯ ಬಲದಿಕ್ಕಿಗೆ ಕೀರ್ತಿಮುಖದ ಅಲಂಕರಣವಿರುವ ನಾಗಶಿಲ್ಪವನ್ನು ಅಳವಡಿಸಲಾಗಿದೆ.

ಸಂಖ್ಯೆ : ೨

ಸ್ಥಳ : ಅಮ್ಮಿನಭಾವಿ

ಸ್ಮಾರಕ : ಮಲ್ಲಿಕಾರ್ಜುನ ದೇವಾಲಯ

ಸ್ಥಳ ನಿರ್ದೇಶನ : ಊರ ನಡುವೆ

ಅಭಿಮುಖ : ಪೂರ್ವಾಭಿಮುಖ

ಕಾಲಮಾನ : ಕ್ರಿ.ಶ. ೧೨ ರಿಂದ ೧೩ನೆಯ ಶತಮಾನ

ಶೈಲಿ : ಕಲ್ಯಾಣ ಚಾಲುಕ್ಯ

**ಸ್ಮಾರಕದ ವಿವರ:**

ಮಲ್ಲಿಕಾರ್ಜುನ ದೇವಾಲಯವು ಜೀರ್ಣೋದ್ಧಾರಗೊಂಡಿದ್ದು, ಗರ್ಭಗೃಹ ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ಪ್ರತಿಯೊಂದು ದೇವಾಲಯಕ್ಕೆ ಗರ್ಭಗೃಹವು ಕೇಂದ್ರ ಬಿಂದುವಾಗಿರುತ್ತದೆ. ಗರ್ಭಗೃಹದಲ್ಲಿ ಪೀಠವಿದ್ದು, ಅದರ ಮೇಲೆ ಲಿಂಗವಿದೆ. ಬಾಗಿಲುವಾಡಗಳಲ್ಲಿ ಅರ್ಧಕಂಭಗಳನ್ನು ಬಿಡಿಸಲಾಗಿದೆ. ಲಲಾಟಬಿಂಬವಿಲ್ಲ, ಬದಲಿಗೆ ಕದಂಬ ನಾಗರ ಶೈಲಿಯ ತೋರಣಗಳಿವೆ. ಗರ್ಭಗೃಹಕ್ಕೆ ಹತ್ತಿಕೊಂಡು ಚೌಕಾಕಾರದ ಅಂತರಾಳವಿದೆ. ಅಂತರಾಳದಲ್ಲಿ ನಂದಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳದ ಬಾಗಿಲುವಾಡಗಳಲ್ಲಿ ಅರ್ಧಕಂಬಗಳನ್ನು ಬಿಡಿಸಲಾಗಿದೆ. ಇಕ್ಕೆಲಗಳಲ್ಲಿ ಜಾಲಂಧ್ರಗಳಿವೆ.

ಅಂತರಾಳದ ಮುಂದಿರುವ ಸಭಾಮಂಟಪವನ್ನು ನವರಂಗವೆಂದು ಕರೆಯಲಾಗಿದೆ. ನವರಂಗದಲ್ಲಿ ೪ ದೇವಕೋಷ್ಠಗಳಿವೆ. ಕಂಬಗಳು ಗಿಡ್ಡಗಿದ್ದು, ಸಣ್ಣಗಾತ್ರದವು. ಇವುಗಳು ಚೌಕಾಕಾರವಾಗಿ ಮತ್ತು ಅಷ್ಟಮುಖ ರಚನೆಯನ್ನು ಹೊಂದಿವೆ. ನೈರುತ್ಯ ಮೂಲೆಯ ಕಂಬಗಳಲ್ಲಿ ಕೀರ್ತಿಮುಖ ಮತ್ತು ಹಾರಗಳ ಅಲಂಕರಣವಿದೆ. ಜೀರ್ಣೋದ್ಧಾರದ ಸಂದರ್ಭದಲ್ಲಿ ಉತ್ತರ ಗೋಡೆಗೆ ಶಾಸನವೊಂದನ್ನು ಅಳವಡಿಸಿದ್ದಾರೆ. ಈ ಶಾಸನ ಕ್ರಿ.ಶ.೧೧೬೩ರ ಕಾಲದ್ದು, ಈ ಶಾಸನದ ಕೊನೆಯ ಎಂಟುಸಾಲು ತ್ರುಟಿತಗೊಂಡಿದೆ.

ಶಾಸನದ ತುಂಬ ಕೇವಲ ಕಂದ ಪದ್ಯಗಳನ್ನು ಬಳಸಲಾಗಿದೆ.[೭] ಈ ಶಾಸನವು ಗೋವೆ ಕದಂಬರ ಪೆರ್ಮಾಡಿದೇವನ ಕಾಲದ್ದು, ಮಾಡಬೊಪ್ಪನು ತ್ರಿಣೇಯನ ಗಣಪೂಜೆಗೆ ನೀಡಿದ ಭೂದಾನದ ಉಲ್ಲೇಖವಿದೆ.[೮] ನವರಂಗಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ಕಮಾನು ದ್ವಾರವನ್ನು ನಿರ್ಮಿಸಿದ್ದಾರೆ ಮೇಲೆ ಗುಮ್ಮಟಾಕಾರದ ಶಿಖರವಿದೆ.

| | | |
|---|---|---|
| ಸಂಖ್ಯೆ | : | ೩ |
| ಸ್ಥಳ | : | ಕರಡಿಗುಡ್ಡ |
| ಸ್ಮಾರಕ | : | ಮಲ್ಲಿಕಾರ್ಜುನ ಗುಡಿ |
| ಸ್ಥಳನಿರ್ದೇಶನ | : | ಗುಡ್ಡದ ಮೇಲೆ |
| ಅಭಿಮುಖ | : | ದಕ್ಷಿಣಾಭಿಮುಖ |
| ಕಾಲಮಾನ | : | ಆಧುನಿಕ |
| ಶೈಲಿ | : | ಸ್ಥಳೀಯ |

**ಸ್ಮಾರಕದ ವಿವರ:**

ಮಲ್ಲಿಕಾರ್ಜುನ ದೇವಾಲಯವು ಎತ್ತರವಾದ ಗುಡ್ಡದ ಮೇಲಿದೆ. ಈ ಗುಡ್ಡದಲ್ಲಿ ಅನೇಕ ಗವಿಗಳಿದ್ದು, ಬಹುಶಃ ಈ ಗವಿಗಳಲ್ಲಿ ಹಿಂದೆ ಕರಡಿಗಳು ವಾಸವಿದ್ದ ಕಾರಣ ಇದನ್ನು ಕರಡಿಗುಡ್ಡವೆಂದು ಕರೆಯಲಾಯಿತು.[೯] ಗರ್ಭಗೃಹ ಉತ್ತರಾಭಿಮುಖವಾಗಿದ್ದು, ಲಿಂಗವು ಪಶ್ಚಿಮಾಭಿಮುಖವಾಗಿ ಪ್ರತಿಷ್ಠಾಪನೆಗೊಂಡಿದೆ. ದೇವಾಲಯವು ಪ್ರಾಕಾರದಿಂದ ಕೂಡಿದ್ದು, ಏರಲು ಮೆಟ್ಟಲುಗಳಿವೆ. ಮುಂಭಾಗದಲ್ಲಿ ಪ್ರವೇಶದ್ವಾರ ಮಂಟಪವಿದೆ ಈ ದೇವಾಲಯ ಮೊದಲು ಮಾಳಿಗೆ ಕಟ್ಟಡವಾಗಿತ್ತು. ಇತ್ತೀಚೆಗೆ ಗಾರೆಗಚ್ಚಿನಿಂದ ಕಟ್ಟಡವನ್ನು ನಿರ್ಮಿಸಲಾಗಿದೆ.

ಗರ್ಭಗೃಹದಲ್ಲಿ ಎರಡು ಲಿಂಗಗಳನ್ನು ಪ್ರತಿಷ್ಠಾಪಿಸಲಾಗಿದೆ. ಸಣ್ಣಲಿಂಗವನ್ನು ಮಲ್ಲಯ್ಯ (ಮಲ್ಲಿಕಾರ್ಜುನ) ದೊಡ್ಡ ಲಿಂಗವನ್ನು ಈಶ್ವರದೇವನೆಂದು ಕರೆಯುತ್ತಾರೆ. ಇತ್ತೀಚೆಗೆ ಅಕ್ಕಮಹಾದೇವಿಯ ಮೂರ್ತಿಯನ್ನು ಅಲ್ಲಿ ಪ್ರತಿಷ್ಠಾಪಿಸಿದ್ದಾರೆ. ಸಭಾಂಗಣದಲ್ಲಿ ತೂಗುಮಂಚವಿದೆ. ಅದರಲ್ಲಿ ಮಲ್ಲಯ್ಯನ ಪಾದುಕೆಗಳನ್ನು ಇಟ್ಟು ಪೂಜಿಸುತ್ತಾರೆ. ಹೊರಗೆ ಆವರಣದ ಕಟ್ಟೆಯಲ್ಲಿ ಭಗ್ನಗೊಂಡಿರುವ ಗಣಪತಿ, ಕುದುರೆ ಮೇಲೆ ಕುಳಿತ ಪೇಠದಾರಿ ವ್ಯಕ್ತಿ, ಪತ್ನಿ ಸಹಿತ ದಕ್ಷ ಮತ್ತಿತರ ಪ್ರಾಚೀನ ಶಿಲ್ಪಾವಶೇಷಗಳವೆ. ಈ ಹಿನ್ನಲೆಯಲ್ಲಿ ಪ್ರಾಚೀನ ಮಲ್ಲಿಕಾರ್ಜುನ ದೇವಾಲಯದ ಅಸ್ತಿತ್ವವನ್ನು ಗುರುತಿಸಬಹುದು. ದೇವಾಲಯದ ಹೊರಭಾಗದಲ್ಲಿರುವ ದೊಡ್ಡ ಪಾದುಕೆಯನ್ನು ಜನರು ಪೂಜಿಸುತ್ತಾರೆ. ಈ ಊರಿನಲ್ಲಿ ಹೆಚ್ಚಿನ

ಜನರು ಕುರುಬ ಸಮುದಾಯಕ್ಕೆ ಸೇರಿದವರಾಗಿದ್ದು, ಇವರು ದೇವಾಲಯಕ್ಕೆ ನಿಷ್ಠೆಯಿಂದ ನಡೆದುಕೊಳ್ಳುತ್ತಾರೆ.

ಸಂಖ್ಯೆ : ೪
ಸ್ಥಳ : ನರೇಂದ್ರ
ಸ್ಮಾರಕ : ಕಲ್ಮೇಶ್ವರ ದೇವಾಲಯ
ಸ್ಥಳ ನಿರ್ದೇಶನ : ಕುಂಬಾರ ಓಣಿ
ಅಭಿಮುಖ : ಪೂರ್ವಾಭಿಮುಖ
ಕಾಲಮಾನ : ಕ್ರಿ.ಶ. ೧೧ – ೧೨ನೆಯ ಶತಮಾನ
ಶೈಲಿ : ಕಲ್ಯಾಣ ಚಾಲುಕ್ಯ

**ಸ್ಮಾರಕದ ವಿವರ:**

ಈ ದೇವಾಲಯವು ಜಿರ್ಣೋದ್ಧಾರಗೊಂಡಿದ್ದು, ಗರ್ಭಗೃಹ, ಮತ್ತು ಸಭಾಮಂಟವನ್ನು ಹೊಂದಿದೆ. ಗರ್ಭಗೃಹವು ಕಲ್ಲಿನಿಂದ ನಿರ್ಮಾಣವಾಗಿದೆ. ಗರ್ಭಗೃಹ ಮಾಳಿಗೆ ಶೈಲಿಯಲ್ಲಿದೆ. ಮುಂಭಾಗದಲ್ಲಿರುವ ಪ್ರವೇಶ ಮಂಟಪಕ್ಕೆ ಸಿಮೆಂಟಿನ ಚಾವಣಿಯನ್ನು ಹೊದಿಸಲಾಗಿದೆ. ಗರ್ಭಗೃಹದಲ್ಲಿ ಶಿವಲಿಂಗ ಸಭಾ ಮಂಟಪದಲ್ಲಿ ಇರುವ ರುದ್ರಭಾಗ ಮಾತ್ರ ನಂದಿಶಿಲ್ಪವಿದೆ.

ಸಂಖ್ಯೆ : ೫
ಸ್ಥಳ : ನರೇಂದ್ರ
ಸ್ಮಾರಕ : ಮಲ್ಲಿಕಾರ್ಜುನ ದೇವಾಲಯ
ಸ್ಥಳನಿರ್ದೇಶನ : ಕಂಬಾಪುರ ಮಹಲ್
ಅಭಿಮುಖ : ಪೂರ್ವಾಭಿಮುಖ
ಕಾಲಮಾನ : ಕ್ರಿ.ಶ. ೧೧ ರಿಂದ ೧೨ನೆಯ ಶತಮಾನ
ಶೈಲಿ : ಕಲ್ಯಾಣ ಚಾಲುಕ್ಯ

**ಸ್ಮಾರಕದ ವಿವರ:**

ಕೇವಲ ದೇವಾಲಯದ ಭಾಗವಾಗಿ ಉಳಿದಿರುವ ಗರ್ಭಗೃಹವು ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ. ಹೊರಭಾಗದಲ್ಲಿ ಗರ್ಭಗೃಹಕ್ಕೆ ಅಭಿಮುಖವಾಗಿ ಇತ್ತೀಚಿನ ನಂದಿ

ಶಿಲ್ಪವಿದೆ. ಗರ್ಭಗೃಹದಲ್ಲಿರುವ ಲಿಂಗ ಅತ್ಯಂತ ಪ್ರಾಚೀನ ಕಾಲದ್ದಾಗಿದೆ. ಇದರ ಪಕ್ಕದಲ್ಲಿ ಲಿಂಗವೊಂದರ ರುದ್ರಭಾಗವಿದೆ. ಗರ್ಭಗೃಹವಷ್ಟೆ ಉಳಿದಿರುವ ಈ ದೇವಾಲಯಕ್ಕೆ ಗಾರೆಗಚ್ಚಿ ಚಾವಣಿಯನ್ನು ಹಾಕಿದ್ದಾರೆ. ಇದರ ಹೊರಗೋಡೆಯನ್ನು ಸಿಮೆಂಟಿನಿಂದ ಮುಚ್ಚಲಾಗಿದೆ. ಗರ್ಭಗೃಹದ ಬಾಗಿಲುವಾಡಗಳಲ್ಲಿ ಅರ್ಧಕಂಬಗಳ ರಚನೆಯನ್ನು ಕಾಣಬಹುದು.

ಈ ದೇವಾಲಯದ ಹೊರಗೆ ಆಗ್ನೇಯ ಮೂಲೆಯಲ್ಲಿ ಶಾಸನವಿದೆ. ಇದು ಕ್ರಿ.ಶ. ೧೧೨೫ರ ಶಾಸನವು ಆರನೆಯ ವಿಕ್ರಮಾಧಿತ್ಯನ ಕಾಲಕ್ಕೆ ಸೇರಿದೆ. ದಂಡನಾಯಕನಾದ ಸಿಂಗರಸನು ಕುಂದೂರಿನಲ್ಲಿ ಕಟ್ಟಿಸಿದ ಶಿವಾಲಯಕ್ಕೆ ಮಹಾಮಂಡಳೇಶ್ವರ ಎರಡನೆಯ ಜಯಕೇಶಿ ಮತ್ತು ಮೈಳಲದೇವಿಯರು ನೀಡಿದ ಭೂದಾನವನ್ನು ಉಲ್ಲೇಖಿಸುತ್ತದೆ.[೧೦] ಕಾರಣ ಈಗೀನ ನರೇಂದ್ರದ ಪ್ರಾಚೀನ ಹೆಸರು ಕುಂದೂರು ಎಂದಿರಬಹುದು. ಪ್ರಾಚೀನ ಕುಂದೂರು-೧೦೦೦ ಪ್ರದೇಶವನ್ನು ನರೇಂದ್ರದ ಪರಿಸರವೆಂದು ಗುರುತಿಲಾಗಿದೆ.[೧೧]

| | | |
|---|---|---|
| ಸಂಖ್ಯೆ | : | ೬ |
| ಸ್ಥಳ | : | ನರೇಂದ್ರ |
| ಸ್ಮಾರಕ | : | ಶಂಕರಲಿಂಗನ ದೇವಾಲಯ |
| ಸ್ಥಳನಿರ್ದೇಶನ | : | ಕೆರೆ ದಂಡೆ |
| ಅಭಿಮುಖ | : | ಪೂರ್ವಾಭಿಮುಖ |
| ಕಾಲಮಾನ | : | ಆಧುನಿಕ |
| ಶೈಲಿ | : | ಸ್ಥಳೀಯ |
| ರಾಜವಂಶ | : | ಕಲ್ಯಾಣ ಚಾಲುಕ್ಯ |

**ಸ್ಮಾರಕದ ವಿವರ:**

ಈ ದೇವಾಲಯದ ಮುಂಭಾಗದಲ್ಲಿ ಹಳೆಯ ದೇವಾಲಯದ ವಾಸ್ತು ಅವಶೇಷಗಳು ಕಂಡುಬರುತ್ತವೆ. ಪ್ರಾಚೀನ ದೇವಾಲಯವು ನಶಿಸಿದ ನಂತರ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿದ್ದಾರೆ. ಗರ್ಭಗೃಹ ಮತ್ತು ಸಭಾಮಂಟಪವಿದೆ. ಗರ್ಭಗೃಹದಲ್ಲಿರುವ ಲಿಂಗವು ಪ್ರಾಚೀನ ಕಾಲದ್ದು, ಹೊರಭಾಗದಲ್ಲಿ ನಾಗಶಿಲ್ಪ ಮತ್ತು ಶಾಸನವು ಪ್ರಾಚೀನ ದೇವಾಲಯದ ಮೇಲೆ ಬೆಳಕು ಚೆಲ್ಲುತ್ತದೆ.

ಶಾಸನದ ಕಾಲವನ್ನು ಕ್ರಿ.ಶ. ೧೧೨೩, ೨೫, ೨೬ ಎನ್ನಲಾಗಿದೆ. ೬ನೆಯ ವಿಕ್ರಮಾಧಿತ್ಯನ ಈ ಶಾಸನವು ಮಹಾಮಂಡಳೇಶ್ವರ ಜಯಕೇಶಿಯಾದಿಗಳಿಂದ ಅರಕೆರೆಯ

ಶಂಕರದೇವರಿಗೆ ನೀಡಿದ ಭೂದಾನವನ್ನು ಉಲ್ಲೇಖಿಸುತ್ತದೆ. ಇದರಿಂದ ಮೇಲಿನ ಕೆರೆಯ ಪ್ರಾಚೀನ ಹೆಸರು ಅರಿಕೆರೆ ಎಂದಿರಬಹುದು.[೧೨] ಅಥವಾ ಅಲ್ಲಿನ ಗ್ರಾಮದ ಹೆಸರಾಗಿರಬಹುದು. ಈಗ ಅಲ್ಲಿ ಯಾವುದೇ ಊರಿಲ್ಲ. ಈ ದೇವಾಲಯದ ಮೇಲ್ಛಾವಣಿಯಲ್ಲಿ ಶಾಸನ ಇದೆ ಎಂದು ಡಾ. ಬಾರ್ನೆಟ್‌ರವರ ಅಭಿಪ್ರಾಯ ೮ ವರ್ಷಗಳ ಹಿಂದೆ ಈ ದೇವಾಲಯವನ್ನು ಕೆಡವಿ ಕಟ್ಟಿರುವುದರಿಂದ ಶಾಸನ ಎಲ್ಲಿಯೊ ಮಾಯವಾಗಿದೆ. ಡಾ. ಬಾರ್ನೆಟ ಅವರು EI XIII ಪುಟ-೩೧೬-೨೩ರಲ್ಲಿ ಪ್ರಕಟಿಸಿದ ಪಾಠವನ್ನೇ ಡಾ. ಎಂ.ಎಂ ಕಲಬುರ್ಗಿಯವರು ಪ್ರಕಟಿಸಿದ್ದಾರೆ.[೧೩]

ಸಂಖ್ಯೆ : ೭
ಸ್ಥಳ : ನರೇಂದ್ರ
ಸ್ಮಾರಕ : ಮಲ್ಲಿಕಾರ್ಜುನ ಗುಡಿ
ಸ್ಥಳನಿರ್ದೇಶನ : ಖಾನಪುರ ಓಣಿ
ಅಭಿಮುಖ : ಪೂರ್ವಾಭಿಮುಖ
ಕಾಲಮಾನ : ಆಧುನಿಕ
ಶೈಲಿ : ಸ್ಥಳೀಯ

**ಸ್ಮಾರಕದ ವಿವರ:**

ದಿಂಡುಗಲ್ಲಿನಿಂದ ನಿರ್ಮಿಸಿದ ದೇವಾಲಯವಾಗಿದ್ದು, ಒಳಗೆ ಪಾಣಿಪೀಠದಲ್ಲಿ ಲಿಂಗದ ರುದ್ರ ಭಾಗವನ್ನು ಅಳವಡಿಸಿ ಮಲ್ಲಿಕಾರ್ಜುನವೆಂದು ಪೂಜಿಸಲಾಗುತ್ತಿದೆ. ಇಲ್ಲಿರುವ ಅವಶೇಷಗಳನ್ನು ಗಮನಿಸಿದರೆ, ಇದನ್ನು ಬೇರೆಡೆಯಿಂದ ತಂದು ಇಟ್ಟಿರಬಹುದು ಎಂದು ಊಹಿಸಬಹುದಾಗಿದೆ.[೧೪] ಈಗ ಈ ದೇವಾಲಯಕ್ಕೆ ಕಟ್ಟಡ ನಿರ್ಮಾಣ ಕಾರ್ಯ ನಡೆಯುತ್ತಿದೆ. ಒಳಗಡೆ ಪ್ರಾಚೀನ ಲಿಂಗ ಮತ್ತು ನಂದಿಶಿಲ್ಪಗಳುವೆ.

ಸಂಖ್ಯೆ : ೮
ಸ್ಥಳ : ಚಂದನಮಟ್ಟಿ
ಸ್ಮಾರಕ : ಪರ್ವತಮಲ್ಲೇಶ್ವರ ಗುಡಿ
ಸ್ಥಳನಿರ್ದೇಶನ : ಬೆಂಕನ ಮಟ್ಟಿ
ಅಭಿಮುಖ : ಪೂರ್ವಾಭಿಮುಖ ಕಾಲಮಾನ : ಆಧುನಿಕ
ಶೈಲಿ : ಸ್ಥಳೀಯ

**ಸ್ಮಾರಕದ ವಿವರ:**

ಪರ್ವತಮಲ್ಲೇಶ್ವರ ಗುಡಿಯು ಕಲ್ಲು ಮತ್ತು ಗಾರೆಗಚ್ಚಿನಿಂದ ನಿರ್ಮಿಸಿದ ಸಣ್ಣ ಕೊಠಡಿಯ ಗರ್ಭಗೃಹವಿದೆ. ಗರ್ಭಗೃಹದಲ್ಲಿರುವ ಲಿಂಗ ಮತ್ತು ನಂದಿ ಇವೆ. ಇದನ್ನು ಸುತ್ತಮುತ್ತಲ ಕೃಷಿಕರು ಪೂಜಿಸುತ್ತಾರೆ. ಈ ಲಿಂಗದ ಮುಂಭಾಗದಲ್ಲಿರುವ ನಯಮಾಡಿದ ಆರು ಶಿಲಾಕೊಡಲಿಗಳು ಮಾತ್ರ ಇದೆ. ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಇವುಗಳ ನಯಗಾರಿಕೆಗೆ ಮನಸೋತ ರೈತರು ದೇವರ ಮುಂದಿಟ್ಟು ಪೂಜಿಸುತ್ತಿದ್ದಾರೆ. ಈ ಶಿಲಾಕೊಡಲಿಗಳು ೩ ಅಂಗುಲದಿಂದ ೭ ಅಂಗುಲದವರೆಗೆ ಉದ್ದವಿದ್ದು ಅವುಗಳ ಎರಡು ಪಾರ್ಶ್ವಗಳನ್ನು ಉಜ್ಜಿ ನಯಗೊಳಿಸಿದ್ದಾರೆ. ಈ ದೇವಾಲಯದ ಮುಂದಿರುವ ಮತ್ತೊಂದು ಅವಶೇಷವೆಂದರೆ ಆಟಿಕೆಗಾತ್ರದ ಕಲ್ಲಿನ ಕಳಸ ಇದರ ಮೇಲೆ ಸೂಕ್ಷ್ಮವಾಗಿ ಮೂರು ಸ್ತ್ರೀ ಶಿಲ್ಪಗಳನ್ನು ಬಿಡಿಸಲಾಗಿದೆ.

ದೇವಾಲಯದ ಮುಂಭಾಗದಲ್ಲಿರುವ ಹುಟ್ಟು ಬಂಡೆಯ ಮೇಲೆ ಮನುಷ್ಯನ ಹೆಜ್ಜೆಗಳನ್ನು ಹೋಲುವ ಗುರುತುಗಳಿದ್ದು, ಅವು ಮಲ್ಲಯ್ಯನ ಹೆಜ್ಜೆಗಳೆಂದು ಸ್ಥಳೀಯರ ಪ್ರತೀತಿ. ಪ್ರಸ್ತುತ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗುಡ್ಡದ ತುದಿಯಲ್ಲಿ ನವಶಿಲಾಯುಗಕ್ಕೆ ಸಂಬಂಧಿಸಿದ ಕೈಗೊಡಲಿ, ಶಾತವಾಹನರ ಕಾಲದ ಕೆಂಪುಮಡಿಕೆ ಚೂರುಗಳು ಅಲ್ಲಲ್ಲಿ ಕಂಡು ಬರುತ್ತವೆ. ಅವುಗಳನ್ನು ಸಂಗ್ರಹಿಸಿಟ್ಟುಕೊಳ್ಳಲಾಗಿದೆ. ಈ ಸ್ಥಳವು ಹಳೆ ಊರಿನ ನಿವೇಶನವೆಂದು ಸ್ಥಳೀಯರು ತಿಳಿಸುತ್ತಾರೆ. ಪ್ರತೀತಿ. ಕಾರಣಾಂತರಗಳಿಂದ ಈ ಊರನ್ನು ಇಂದಿನ ಚಂದನಮಟ್ಟಿಗೆ ಸ್ಥಳಾಂತರಿಸಲಾಗಿದೆ.

ಗುಡಿಯ ಹೊರಭಾಗದಲ್ಲಿ ಕಲ್ಲಾಸರೆ ಗವಿಯೊಂದಿದೆ. ಈ ಗವಿಯನ್ನು ಹುಲಿಗವಿಯೆಂದು ಕರೆಯುತ್ತಾರೆ. ದನಗಾಯಿಗಳು ಗವಿಯ ದ್ವಾರವನ್ನು ಕಲ್ಲುಗಳಿಂದ ಮುಚ್ಚಿದ್ದಾರೆ. ಈ ಪರಿಸರದಲ್ಲಿ ಹಿಂದೆ ಹುಲಿಗಳಿದ್ದವೆಂದು ಸ್ಥಳೀಯರಿಂದ ತಿಳಿದು ಬರುತ್ತದೆ. ಹೀಗೆ ಬೆಂಕನಮಟ್ಟಿಯು ನವಶಿಲಾಯುಗ ಕಾಲದಿಂದಲೂ ಮನುಷ್ಯನ ವಸತಿನೆಲೆಯಾಗಿತ್ತೆಂಬುದು ಗಮನಾರ್ಹ ಸಂಗತಿ.[೧೫]

| | | |
|---|---|---|
| ಸಂಖ್ಯೆ | : | ೯ |
| ಸ್ಥಳ | : | ಚಂದನಮಟ್ಟಿ |
| ಸ್ಮಾರಕ | : | ಬಸವಣ್ಣ ದೇವರ ಗುಡಿ |
| ಸ್ಥಳನಿರ್ದೇಶನ | : | ಊರ ಮುಂಭಾಗ |
| ಅಭಿಮುಖ | : | ದಕ್ಷಿಣಾಭಿಮುಖ |

ಕಾಲಮಾನ : ಆಧುನಿಕ

ಶೈಲಿ : ಸ್ಥಳೀಯ

**ಸ್ಮಾರಕದ ವಿವರ:**

ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ನಂದಿಯನ್ನು ಪ್ರತಿಷ್ಠಾಪಿಸಿದ್ದಾರೆ. ಸಭಾಮಂಟಪವು ನಾಲ್ಕು ಕಂಬ ಮತ್ತು ಅರ್ಧಗಂಭಗಳನ್ನು ಹೊಂದಿದೆ. ಭುವನೇಶ್ವರಿಯಲ್ಲಿ ಕಮಲ ಇದೆ, ದೇವಾಲಯಕ್ಕೆ ಲಲಾಟಬಿಂಬವಿಲ್ಲ, ದೇವಾಲಯದ ಹೂರಭಾಗದಲ್ಲಿ ಬಿಲ್ವವೃಕ್ಷದ ಕೆಳಗೆ ಹಳೆಯ ಲಿಂಗಾವಶೇಷಗಳು ಕಂಡುಬರುತ್ತವೆ. ಗುಂಡಾದ ಕವಣೆ ಕಲ್ಲನ್ನು ಪ್ರಾಕಾರದ ಹೊರಗೆ ಊರ ಜನರು ಪೂಜಿಸುತ್ತಾರೆ.

ಸಂಖ್ಯೆ : ೧೦

ಸ್ಥಳ : ಕನಕೂರು

ಸ್ಮಾರಕ : ಕನಕಾಂಬಿಕಾ ದೇವಾಲಯ

ಸ್ಥಳನಿರ್ದೇಶನ : ಊರ ಮುಂಭಾಗ

ಅಭಿಮುಖ : ದಕ್ಷಿಣಾಭಿಮುಖ

ಕಾಲಮಾನ : ಆಧುನಿಕ

ಶೈಲಿ : ಸ್ಥಳೀಯ

**ಸ್ಮಾರಕದ ವಿವರ:**

ಕನಕಾಂಬಿಕ ದೇವಾಲಯವು ಊರ ಮೊದಲಬಾಗಿಲಿಗೆ ವಿಶಾಲವಾದ ದೇವಾಲಯವಾಗಿದ್ದು. ಇದನ್ನು ಕಲ್ಲಿನಿಂದ ಕಟ್ಟಲಾಗಿದೆ. ಇದರ ಸುತ್ತುಲೂ ಪ್ರಾಕಾರವಿದೆ. ಇದು ಇತೀಚೆಗೆ ಜೀರ್ಣೋದ್ಧಾರಗೊಂಡ ದೇವಾಲಯವಿದೆ. ದೇವಾಲಯ ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಮಹಿಷಮರ್ದಿನಿಯ ಎರಡು ಶಿಲ್ಪಗಳು ಹಾಗೂ ಕುಬೇರನ ಶಿಲ್ಪಗಳಿವೆ. ಈ ಶಿಲ್ಪಗಳು ಪ್ರಾಚೀನವಾದವು ಸಭಾಮಂಟಪದಲ್ಲಿ ಭೈರವಿಯ ಮೂರು ಶಿಲ್ಪಗಳಿವೆ, ಕಾಲಭೈರವನ ಶಿಲ್ಪವು ತ್ರಿಭಂಗಿಯಲ್ಲಿದ್ದು, ಪ್ರಾಚೀನವಾದುದು. ಈ ಎಲ್ಲ ಶಿಲ್ಪಾವಶೇಷಗಳು ಇಲ್ಲಿ ಪ್ರಾಚೀನ ಶಿವಾಲಯವಿದ್ದ ಬಗ್ಗೆ ಬೆಳಕು ಚೆಲ್ಲುತ್ತವೆ. ನಾಗ ಮತ್ತಿತರ ಶಿಲ್ಪಾವಶೇಷಗಳನ್ನು ಹೊರಭಾಗದಲ್ಲಿ ಕಾಣಬಹುದಾಗಿದೆ. ಈ ದೇವಾಲಯದ ಕಂಬದಲ್ಲಿರುವ ಕ್ರಿ.ಶ. ೧೧೦೪ರ ಆರನೆ ವಿಕ್ರಮಾಧಿತ್ಯನ ಶಾಸನವು,

ಜಯಕೇಶಿ ಅರಸನು ವಾಮನ ಭಟ್ಟೋಪಾಧ್ಯಾಯನಿಗೆ ಕನಕಾಪುರ ಗ್ರಾಮವನ್ನು ದಾನ ನೀಡಿದನೆಂದು ತಿಳಿಸುತ್ತದೆ.[೧೬]

ಸಂಖ್ಯೆ : ೧೧

ಸ್ಥಳ : ಕನಕೂರು

ಸ್ಮಾರಕ : ಕಲ್ಮೇಶ್ವರ ದೇವಾಲಯ

ಸ್ಥಳನಿರ್ದೇಶನ : ಊರ ದಕ್ಷಿಣ

ಅಭಿಮುಖ : ಪೂರ್ವಾಭಿಮುಖ

ಕಾಲಮಾನ : ಕ್ರಿ.ಶ. ೧೧ – ೧೩ನೆಯ ಶತಮಾನ

ಶೈಲಿ : ಕಲ್ಯಾಣ ಚಾಲುಕ್ಯ

**ಸ್ಮಾರಕದ ವಿವರ:**

ಕಲ್ಮೇಶ್ವರ ದೇವಾಲಯವು ಸಂಪೂರ್ಣವಾಗಿ ಬಿದ್ದುಹೋಗಿದ್ದು, ಅದೇ ಸ್ಥಳದಲ್ಲಿ ಲಿಂಗ, ನಂದಿ ಮತ್ತಿತರ ಶಿಲ್ಪಾವಶೇಷಗಳು ತೆರೆದ ಸ್ಥಿತಿಯಲ್ಲಿವೆ. ಮುಂಭಾಗದಲ್ಲಿ ಬಿದ್ದಿರುವ ಶಾಸನ ತ್ರುಟಿತವಾಗಿದ್ದು, ಲಿಪಿ ದೃಷ್ಟಿಯಿಂದ ಕಲ್ಯಾಣಚಾಲುಕ್ಯರ ಕಾಲಕ್ಕೆ ಸೇರಿದೆ. ಶಾಸನದ ಕೆಲವು ಸಾಲುಗಳು ಸವೆದಿದ್ದು, ಕೆಳಭಾಗದ ಬಲಮೂರ್ತಿಯು ಭಗ್ನಗೊಂಡಿದೆ. ಈ ದೇವಾಲಯದಲ್ಲಿ ದಿನಾಲೂ ಪೂಜೆ ನಡೆಯುತ್ತದೆ. ಹಬ್ಬ–ಹರಿದಿನಗಳಲ್ಲಿ ವಿಶೇಷಪೂಜೆ ನಡೆಯುತ್ತದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬಸಯ್ಯ ಹಿರೇಮಠ ಅವರ ಹೊಲದಲ್ಲಿದ್ದ ದೇವಾಲಯದ ಸ್ಥಿತಿಯನ್ನು ವಿವರಿಸಿದರು, ಅವರೇ ಪೂಜೆಯನ್ನು ನೆರವೇರಿಸುತ್ತಾರೆ.

ಸಂಖ್ಯೆ : ೧೨

ಸ್ಥಳ : ಕನಕೂರು

ಸ್ಮಾರಕ : ರಾಮಲಿಂಗೇಶ್ವರ ದೇವಾಲಯ

ಸ್ಥಳನಿರ್ದೇಶನ : ಊರ ಮುಂಭಾಗ

ಕಾಲಮಾನ : ಆಧುನಿಕ

ಶೈಲಿ : ಸ್ಥಳೀಯ

ಸ್ಥಿತಿ : ಕನಿಷ್ಟ

**ಸ್ಮಾರಕದ ವಿವರ:**

ಸ್ಥಳೀಯ ಶೈಲಿಯಲ್ಲಿ ನಿರ್ಮಿಸಿರುವ ದೇವಾಲಯ ಇತ್ತೀಚಿನದು, ಗರ್ಭಗೃಹ ಮತ್ತು ಸಭಾಮಂಟಪಗಳಿರುವ ದೇವಾಲಯದ ಗೋಡೆಯನ್ನು ಕಲ್ಲು ಮತ್ತು ಮಣ್ಣಿನಿಂದ ನಿರ್ಮಿಸಿದ್ದಾರೆ. ಮೊದಲಿಗೆ ಇದು ಮಾಳಿಗೆ ಕಟ್ಟಡದ ಗುಡಿಯಾಗಿತ್ತು. ನಂತರ ಅದನ್ನು ಕೆಡವಿ ಈಗಿರುವ ದೇವಾಲಯವನ್ನು ನಿರ್ಮಿಸಿದ್ದಾರೆ. ಲಿಂಗವೊಂದರ ರುದ್ರಭಾಗವನ್ನು ನೆಲದಲ್ಲಿ ನಿಲ್ಲಿಸಿ ಪೂಜಿಸಲಾಗುತ್ತಿದೆ. ಹೊರಭಾಗದಲ್ಲಿ ಭಗ್ನಗೊಂಡಿರುವ ನಂದಿಶಿಲ್ಪವನ್ನು ಕಾಣಬಹುದು. ಮುಂಭಾಗದಲ್ಲಿ ಶಾಸನವೊಂದನ್ನು ನಿಲ್ಲಿಸಲಾಗಿದ್ದು, ಅಕ್ಷರಗಳು ಸಂಪೂರ್ಣವಾಗಿ ಸವೆದು ಹೋಗಿದೆ.

| | | |
|---|---|---|
| ಸಂಖ್ಯೆ | : | ೧೩ |
| ಸ್ಥಳ | : | ಹೆಬ್ಬಳ್ಳಿ |
| ಸ್ಮಾರಕ | : | ಶಂಭುಲಿಂಗೇಶ್ವರ ದೇವಾಲಯ |
| ಸ್ಥಳನಿರ್ದೇಶನ | : | ಊರ ನಡುವೆ |
| ಕಾಲಮಾನ | : | ಕ್ರಿ.ಶ. ೧೩ನೆಯ ಶತಮಾನ |
| ಶೈಲಿ | : | ಸೇವುಣ |
| ರಾಜವಂಶ | : | ಸೇವುಣರು |
| ಅಭಿಮುಖ | : | ಪೂರ್ವಾಭಿಮುಖ |

**ಸ್ಮಾರಕದ ವಿವರ:**

ಶಂಭುಲಿಂಗೇಶ್ವರ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ಗರ್ಭಗೃಹವು ಚೌಕಾರಾರವಾಗಿದ್ದು ನಾಲ್ಕು ಚೌಕ ಮೂಲೆಗಂಬಗಳನ್ನು ಹೊಂದಿದೆ. ಗರ್ಭಗೃಹದ ಮಧ್ಯ ಶಿವಲಿಂಗವಿದೆ. ಪ್ರವೇಶದ್ವಾರ ತ್ರಿಶಾಲಂಕಾರದಲ್ಲಿದೆ. ಈ ಶಾಖೆಗಳು ಸರಳವಾಗಿವೆ. ಲಲಾಟದಲ್ಲಿ ಗಣೇಶನ ಉಬ್ಬು ಶಿಲ್ಪವಿರುವುದು ವಿಶೇಷವಾಗಿದೆ.

ಅಂತರಾಳವು ಜೀರ್ಣೋದ್ಧಾರಗೊಂಡ ಪ್ರವೇಶದ್ವಾರವನ್ನು ಹೊಂದಿದೆ ಅಂತರಾಳದ ಪ್ರವೇಶದ್ವಾರದಲ್ಲಿ ಸ್ತಂಭ ಪಟ್ಟಿಕೆ ಇದೆ. ಅಂತರಾಳ ದ್ವಾರದ ಇಕ್ಕೆಲಗಳಲ್ಲಿ ಜಾಲಂದ್ರಗಳಿದ್ದು, ರಚನೆಯಲ್ಲಿ ಸರಳವಾಗಿವೆ. ಆದರೆ ಕಲ್ಯಾಣ ಚಾಲುಕ್ಯರ ಕಾಲದ ಜಾಲಂದ್ರದಷ್ಟು ಸುಂದರವಾಗಿಲ್ಲ. ಅಂತರಾಳದ ಮುಂಭಾಗದಲ್ಲಿ ನವರಂಗವಿದೆ. ನವರಂಗದ ಮಧ್ಯ ನಾಲ್ಕು ಕಂಬಗಳು ಪೀಠ, ಚೌಕ, ಬಹುಮುಖ ಪಟ್ಟಿಕೆಗಳು, ಕಲಶ, ಫಲಕ ಮತ್ತು ಸರಳ

ಬೋಧಿಗೆಯಲ್ಲಿವೆ. ಈ ಕಂಬಗಳಿಗೆ ನಂತರದ ಕಾಲದಲ್ಲಿ ಎರಡು ಭಾಗಗಳನ್ನು ಹೊಸದಾಗಿ ಸೇರ್ಪಡೆ ಮಾಡಲಾಗಿದೆ. ಸೇರ್ಪಡೆಯಾದ ಭಾಗಗಳು ಕಾಂಡದ ಕೆಳಭಾಗದಲ್ಲಿ ಮತ್ತು ಫಲಕದ ಮೇಲ್ಭಾಗದಲ್ಲಿವೆ.

ನವರಂಗದಲ್ಲಿ ನಾಲ್ಕು ದೇವಕೋಷ್ಠಗಳಿವೆ. ದೇವರಕೋಷ್ಠಗಳು ಅಧಿಷ್ಠಾನ ಮತ್ತು ದ್ರಾವಿಡ ವಿಮಾನಗಳನ್ನು ಒಳಗೊಂಡಿದೆ. ದೇವಕೋಷ್ಠಿಗಳಲ್ಲಿ ಸತಿ, ಪತಿ, ಮಹಿಷಮರ್ದಿನಿ, ಕಾಳಿಕಾಶಿಲ್ಪಗಳಿವೆ. ಮತ್ತೊಂದು ಖಾಲಿ ಇದೆ. ಭುವನೇಶ್ವರಿಯಲ್ಲಿ ಕಮಲವನ್ನು ಚಿತ್ರಿಸಿದ್ದಾರೆ. ದೇವಾಲಯದ ದ್ವಾರಗಳ ಮೇಲೆ ಸಿಂಹಗಳ ಉಬ್ಬುರಚನೆ ಮತ್ತು ನಾಗರಶಿಖರಗಳನ್ನು ಅಲಂಕಾರಣಕ್ಕಾಗಿ ಬಿಡಿಸಿರುವುದನ್ನು ಕಾಣಬಹುದು. ಪ್ರವೇಶದ್ವಾರದ ಗುಮ್ಮಟಗಳನ್ನು ಗಾರೆ ಮತ್ತು ಚಕ್ಕೆಗಲ್ಲುಗಳನ್ನು ಬಳಸಿ ನಿರ್ಮಿಸಿದ್ದಾರೆ. ಇದು ಬಹುಶಃ ಸವಣೂರು ನವಾಬರ ಕಾಲದಲ್ಲಿ ನಿರ್ಮಾಣವಾಗಿರಬೇಕು.[೧೭] ದೇವಾಲಯದ ಆವರಣದಲ್ಲಿ ಅಲ್ಲಲ್ಲಿ ಹಳೆಯ ದೇವಾಲಯಕ್ಕೆ ಸೇರಿದ ದುಂಡಾದ ಕಂಬಗಳು ಕಂಡುಬರುತ್ತವೆ. ದೇವಾಲಯವು ಆದಿಷ್ಠಾನ ಹೊಂದಿದ್ದು ಭಿತ್ತಿ ಜೀರ್ಣೋದ್ದಾರಗೊಂಡಿದೆ. ದೇವಾಲಯದ ಮುಂಭಾಗದಲ್ಲಿ ಶಿಲಾತೋರಣವಿದೆ. ಈ ದೇವಾಲಯದಲ್ಲಿ ಮೂರು ಶಾಸನಗಳು ಕಂಡುಬರುತ್ತದೆ. ಮೊದನೆಯದು ಕ್ರಿ.ಶ. ೧೨೪೮ ಶಾಸನ ಶಂಭುಲಿಂಗ ದೇವಾಲಯದ ದ್ವಾರದ ಎಡಭಾಗದಲ್ಲಿ ನಿಂತಿರುವ ಈ ಶಾಸನ ಅಲ್ಲಲ್ಲಿ ತ್ರುಟಿತವಾಗಿದೆ. ಯಾದವ ಕನೇರ ದೇವನ ಆಳ್ವಿಕೆಯ ಕಾಲದಲ್ಲಿ ಈ ಶಾಸನ ನಿರ್ಮಾಣವಾಗಿದೆ. ದೇವರಿಗೆ ಮತ್ತು ಬ್ರಹ್ಮಪುರಿಯ ಬ್ರಾಹ್ಮಣರಿಗೆ ಅಧಿಕಾರಿಗಳು ನೀಡಿದ ದಾನಗಳನ್ನು ಉಲ್ಲೇಖಿಸಲಾಗಿದೆ.[೧೮]

ಎರಡನೆಯದು, ಸುಮಾರು ಕ್ರಿ.ಶ. ೧೬ನೆಯ ಶತಮಾನದ್ದು. ಇದು ಶಂಭುಲಿಂಗ ಗುಡಿಯ ಕಂಬದ ಮೇಲೆ ೧ನೆಯ ಸಾಲಿನ ಪಟ್ಟಿಕೆ ಶಾಸನವಿದೆ 'ಸ್ವಯಂಭುದೇವರ ಸಿವಯನು'ಎಂಬ ಉಲ್ಲೇಖ ಈ ಶಾಸನದಲ್ಲಿದೆ.[೧೯] ಅಂದರೆ ಶಂಭುಲಿಂಗ ದೇವಾಲಯಕ್ಕೆ ಶಾಸನ ಉಲ್ಲೇಖಿತ ಹೆಸರು ಶ್ರೀಸ್ವಯಂಭೂದೇವ ಎಂದು ಉಲ್ಲೇಖಿಸುತ್ತದೆ. ಮತ್ತೊಂದು ಶಾಸನ ೧೩ನೆಯ ಶತಮಾನಕ್ಕೆ ಸೇರಿದ್ದು. ಆ ಶಾಸನ ದೇವಾಲಯದ ಸಮೀಪವಿದೆ. ಯಾಪನೀಯ ಸಂಘ ಮತ್ತು ಪುನ್ನಾಗ ವೃಕ್ಷ ಮೂಲಗಣವನ್ನು ಉಲ್ಲೇಖಿಸಿ ಮೊರಬ ಗ್ರಾಮವನ್ನು ದತ್ತಿ ನೀಡಿದ ಬಗ್ಗೆ ತಿಳಿಸುತ್ತದೆ.[೨೦] ದೇವಾಲಯದ ಪ್ರಥಮಬಾಗಿಲ ಬಲಭಾಗದಲ್ಲಿ ಚಿದಂಬರ ಪೀಠವಿದೆ.

ಸಂಖ್ಯೆ : ೧೪

ಸ್ಥಳ : ಹೆಬ್ಬಳ್ಳಿ

ಸ್ಮಾರಕ : ಚೆಂಗಳಮ್ಮನ ಗುಡಿ

ಸ್ಥಳನಿರ್ದೇಶನ : ಊರ ಪೂರ್ವ

ಕಾಲಮಾನ : ೧೧ ರಿಂದ ೧೨ನೆಯ ಶತಮಾನ

ಶೈಲಿ : ಕಲ್ಯಾಣ ಚಾಲುಕ್ಯ

ಅಭಿಮುಖ : ಉತ್ತರಾಭಿಮುಖ

ಸ್ಥಿತಿ : ಕನಿಷ್ಟ ವಸ್ತು : ಮೃದುವಾದ ಕಪ್ಪುಶಿಲೆ

**ಸ್ಮಾರಕದ ವಿವರ:**

ದೇವಾಲಯವು ಒಂದು ಕೆರೆಯ ದಂಡೆಯ ಮೇಲೆ ಇದ್ದು, ಈಕೆಯನ್ನು ಚೆಂಗಳೆವ್ವಾ ಎಂದು ಕರೆಯುತ್ತಾರೆ. ಮುಂದೆ ಇರುವ ಕೆರೆಯನ್ನು ಚೆಂಗಳವ್ವನ ಕೆರೆ ಎನ್ನುತ್ತಾರೆ. ಈ ದೇವಾಲಯವು ಅತಿ ಪುರಾತವಾಗಿದ್ದು, ಗರ್ಭಗುಡಿ ನಶಿಸಿ ಹೋಗಿದೆ. ನವರಂಗದ ಗೂಡಿನಲ್ಲಿ ಮೂರ್ತಿಯನ್ನು ಪೂಜಿಸಲಾಗುತ್ತದೆ. ಈ ದೇವಾಲಯ ಮೊದಲು ಗ್ರಾಮದೇವತೆಯಾಗಿತ್ತು. ಇದಕ್ಕೆ ೨೦೦ ಎಕರೆ ಜಮಿನುಗಳಿದ್ದವು.

ನವರಂಗದ ಪಶ್ಚಿಮ ಭಾಗದಲ್ಲಿ ಎತ್ತರ ಪೀಠದ ಮೇಲೆ ಮೂರ್ತಿಯು ಕುಳಿತ ಬಂಗಿಯಲ್ಲಿದೆ. ಇದನ್ನು ೩೦ ವರ್ಷದ ಹಿಂದೆ ಪ್ರತಿಷ್ಠಾಪಿಸಿದ್ದಾರೆ. ಮಧ್ಯದ ನಾಲ್ಕು ಕಂಬಗಳು ಚೌಕ ಮತ್ತು ಪಟ್ಟಿಕೆಗಳ ರಚನೆಯಿದೆ. ಮೇಲ್ಛಾವಣಿ ಜೀರ್ಣೋದ್ದಾರಗೊಂಡಿದೆ. ಬಾಗಿಲುವಾಡಗಳಲ್ಲಿ ಅರ್ಧಕಂಬಗಳ ಅಲಂಕರಣವುಂಟು. ದೇವಾಲಯದ ಹೊರಭಾಗದಲ್ಲಿ ಬಾಹುಬಲಿ ಮತ್ತಿತರ ಪ್ರಾಚೀನ ಶಿಲ್ಪಾವಶೇಷಗಳು ಭಗ್ನಗೊಂಡ ಸ್ಥಿತಿಯಲ್ಲಿದೆ.

ಸಂಖ್ಯೆ : ೧೫

ಸ್ಥಳ : ಮಾರಡಗಿ

ಸ್ಮಾರಕ : ಕಲ್ಮೇಶ್ವರ ಗುಡಿ

ಅಭಿಮುಖ : ಪೂರ್ವಾಭಿಮುಖ

ಸ್ಥಳನಿರ್ದೇಶನ : ಕೆರೆ ದಂಡೆ

ಕಾಲಮಾನ : ಆಧುನಿಕ

ಶೈಲಿ : ಸ್ಥಳೀಯ

ಸ್ಥಿತಿ : ಮಧ್ಯಮ

**ಸ್ಮಾರಕದ ವಿವರ:**

ಈ ದೇವಾಲಯವು ಇತ್ತೀಚೆಗೆ ನಿರ್ಮಾಣಗೊಂಡಿರುವ ಒಂದೆ ಕೊಠಡಿಯ ದೇವಾಲಯವಿದು, ಇದೇ ಊರಿನ ಹುಚ್ಚಪ್ಪ ಸಾಹುಕಾರರು ದೇವಾಲಯವನ್ನು ಚಕ್ಕೆಕಲ್ಲು ಮತ್ತು ಸಿಮೆಂಟಿನಿಂದ ನಿರ್ಮಿಸಲಾಗಿದೆ.

ಈ ದೇವಾಲಯದಲ್ಲಿರುವ ಲಿಂಗ ಮತ್ತು ನಂದಿಶಿಲ್ಪಗಳು ಇತ್ತೀಚಿನದು, ಆದರೆ ಹೊರಭಾಗ ಹಳೆಯ ದೇವಾಲಯಕ್ಕೆ ಸೇರಿದ ಲಿಂಗ, ಭಗ್ನಗೊಂಡಿರುವ ನಂದಿ ಮತ್ತು ನಾಗ ಮತ್ತಿತರ ಶಿಲ್ಪಾವಶೇಷಗಳು ಕಂಡುಬರುತ್ತವೆ.

ಕಲ್ಮೇಶ್ವರ ದೇವಾಲಯವನ್ನು ಭಕ್ತನಾದ ಹುಚ್ಚಪ್ಪ ಬಸಪ್ಪ ಕೆರೆಕೊಪ್ಪ ಅವರು ತಮ್ಮ ಸ್ವಇಚ್ಛೆಯಿಂದ ಜೀರ್ಣೋದ್ಧಾರಗೊಳಿಸಿದ್ದಾರೆ.

| | | |
|---|---|---|
| ಸಂಖ್ಯೆ | : | ೧೬ |
| ಸ್ಥಳ | : | ಮಾರಡಗಿ |
| ಸ್ಥಳನಿರ್ದೇಶನ | : | ಕುರುಡಾಪುರ |
| ಅಭಿಮುಖ | : | ಪೂರ್ವಾಭಿಮುಖ |
| ಸ್ಮಾರಕ | : | ವೀರಭದ್ರೇಶ್ವರ ಗುಡಿ |
| ಕಾಲಮಾನ | : | ಕ್ರಿ.ಶ. ೧೩ನೆಯ ಶತಮಾನ |
| ಶೈಲಿ | : | ಸೇವುಣ |
| ಸ್ಥಿತಿ | : | ಮಧ್ಯಮ |

**ಸ್ಮಾರಕದ ವಿವರ:**

ವೀರಭದ್ರ ದೇವಾಲಯ ಅತಿ ಪ್ರಸಿದ್ದವಾಗಿದೆ. ವಿಶಾಲವಾದ ಗುಡ್ಡದ ಮೇಲೆ ನಿರ್ಮಿಸಿದ ಬೃಹತ್ ದೇವಾಲಯವಿದೆ. ವಿಶಾಲವಾದ ಸಭಾಂಗಣವಿದೆ ಇದರ ಸುತ್ತಲೂ ತಗ್ಗಿನಿಂದ ಕೂಡಿದ್ದು, ಈಗ ಕೃಷಿಭೂಮಿಯಿಂದ ದೇವಾಲಯ ಆವೃತ್ತವಾಗಿದೆ. ದೇವಾಲಯವು ತ್ರಿಕೂಟ ರಚನೆಯದು, ಪ್ರತಿ ಗರ್ಭಗೃಹವು ಅಂತರಾಳವನ್ನು ಹೊಂದಿದೆ. ದೇವಾಲಯದ ಒಳಗೆ ಶಿವಲಿಂಗವಿದ್ದು ಮೂರು ದಿಕ್ಕಿನ ಕಡೆ ಪಶ್ಚಿಮ ಮತ್ತು ಉತ್ತರ ಹಾಗೂ ದಕ್ಷಿಣಕ್ಕೆ ಮೂರು ಗರ್ಭಗೃಹಗಳಿವೆ. ಒಂದನೆಯ ಗರ್ಭಗೃಹದಲ್ಲಿ ಈಶ್ವರಲಿಂಗವಿದೆ ಇದನ್ನು ಮಲ್ಲಯ್ಯ ಎಂದು ಕರೆಯುತ್ತಾರೆ.

ಅಂತರಾಳದಲ್ಲಿ ನಂದಿಶಿಲ್ಪವುಂಟು, ಇಲ್ಲಿ ತೂಗು ಮಂಚ ಇದೆ, ಪ್ರತಿ ಮಂಗಳವಾರ ಈ ತೂಗುಮಂಚದಲ್ಲಿ ಉತ್ಸವ ಮೂರ್ತಿಯನ್ನು ಇಟ್ಟು ಪೂಜಿಸುತ್ತಾರೆ. ನಂತರ ದಕ್ಷಿಣಕ್ಕೆ ವೀರಭದ್ರ ದೇವರ ಗರ್ಭಗೃಹವಿದೆ. ಈಗ ಪ್ರಧಾನವಾಗಿ ಪೂಜೆಗೊಳ್ಳತ್ತಿವೆ. ಉತ್ತರಕ್ಕೆ ಇನ್ನೊಂದು ಗರ್ಭಗೃಹವಿದ್ದು, ಅಲ್ಲಿ ಈಗ ಯಾವೂದೇ ಮೂರ್ತಿ ಇರುವುದಿಲ್ಲ.

ಅಂತರಾಳಕ್ಕೆ ಹೊಂದಿಕೊಂಡಂತೆ ನವರಂಗ ಇದ್ದು, ನಂದಿಯು ಪೂರ್ವಾಭಿಮುಖವಾಗಿದೆ. ನವರಂಗದಲ್ಲಿ ಸರಳ ಹಾಗೂ ಒರಟು ರಚನೆಯ ದೇವಕೊಷ್ಠಗಳಿವೆ. ಮಧ್ಯದದ ಕಂಭಗಳು ಚೌಕ ಮತ್ತು ಅಷ್ಟಮುಖ ರಚನೆಯನ್ನು ಹೊಂದಿದೆ. ಗಣಪತಿ ಮತ್ತು ನಾಗಶಿಲ್ಪಗಳಿವೆ. ಮತ್ತು ಇನ್ನಿತರ ಪರಿವಾರ ದೇವತೆಗಳಿಗೆ ದೇವಾಲಯದ ಹೊರಗೋಡೆಯನ್ನು ಸ್ಥಳೀಯ ಕಲ್ಲುಗಳನ್ನು ಬಳಸಿ ನವೀಕರಿಸಲಾಗಿದೆ. ಈ ದೇವಾಲಯದ ಮುಂಭಾಗದಲ್ಲಿ ಆಂಜನೇಯ ದೇವಾಲಯವಿದೆ. ಅದರ ಎದುರಿಗೆ ಪತ್ರಿ ಮರವಿದೆ. ಅಲ್ಲಿ ಕೆಲ ಪ್ರಾಚ್ಯಾವಶೇಷಗಳು ಮತ್ತು ಪಾದುಕೆಗಳಿರುವದನ್ನು ಕಾಣಬಹುದಾಗಿದೆ. ಸುಮಾರು ಕ್ರಿ.ಶ. ೧೯೦೨ರಲ್ಲಿ ಗತಿಸಿದ ಪ್ಲೇಗ್ ಹಾವಳಿಯಿಂದಾಗಿ ಕುರುಡಾಪುರದ ಗ್ರಾಮಸ್ಥರು ಸಮೀಪದ ಹೆಬ್ಬಳ್ಳಿ, ಮಾರಡಗಿ ಗ್ರಾಮಗಳಿಗೆ ವಲಸೆ ಹೋದರಂತೆ, ಹಾಗಾಗಿ ಕುರುಡಾಪುರ ಹಾಳು ಗ್ರಾಮವಾಯಿತೆಂದು ಇಲ್ಲಿನ ಅರ್ಚಕರು ತಿಳಿಸುತ್ತಾರೆ.

| | | |
|---|---|---|
| ಸಂಖ್ಯೆ | : | ೧೭ |
| ಸ್ಥಳ | : | ತಲವಾಯಿ |
| ಸ್ಮಾರಕ | : | ಕಲ್ಮೇಶ್ವರ ದೇವಾಲಯ |
| ಸ್ಥಳನಿರ್ದೇಶನ | : | ಊರ ಈಶಾನ್ಯ ಮೂಲೆ |
| ಅಭಿಮುಖ | : | ಪೂರ್ವ |
| ಕಾಲಮಾನ | : | ಆಧುನಿಕ |
| ಶೈಲಿ | : | ಸ್ಥಳೀಯ |
| ಸ್ಥಿತಿ | : | ಕನಿಷ್ಠ |

**ಸ್ಮಾರಕದ ವಿವರ:**

ಕಲ್ಮೇಶ್ವರ ದೇವಾಲಯವು ಗರ್ಭಗೃಹ ಮತ್ತು ತೆರೆದ ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ವೇದಿಕೆಯ ಮೇಲೆ ಪ್ರಾಚೀನಲಿಂಗವನ್ನು ಇಡಲಾಗಿದೆ. ಹೂರಭಾಗದಲ್ಲಿ ಭಗ್ನಗೊಂಡ ಶಾಸನಶಿಲ್ಪವಿದೆ. ಈ ಎಲ್ಲ ಅಂಶಗಳನ್ನು ಗಮನಿಸಿದಾಗ

ಬಹುಶಃ ಇಲ್ಲಿ ಹಳೆಯ ದೇವಾಲಯವಿದ್ದು, ಅದು ಹಾಳಾದ ನಂತರ ಈಗಿರುವ ದೇವಾಲಯವನ್ನು ನಿರ್ಮಿಸಿರಬೇಕು.

ಸಂಖ್ಯೆ : ೧೮

ಸ್ಥಳ : ತಲವಾಯಿ

ಸ್ಮಾರಕ : ಈಶ್ವರ ದೇವಾಲಯ

ಅಭಿಮುಖ : ಪೂರ್ವ

ಕಾಲಮಾನ : ಆಧುನಿಕ

ಶೈಲಿ : ಗಾರೆಗಚ್ಚು

ಸ್ಥಿತಿ : ಉತ್ತಮ

**ಸ್ಮಾರಕದ ವಿವರ:**

ಈ ದೇವಾಲಯವು ಇತ್ತೀಚೆಗೆ ನಿರ್ಮಿಸಿರುವ ದೇವಾಲಯವಿದು. ಗರ್ಭಗೃಹ ಮತ್ತು ತೆರೆದ ಸಭಾಮಂಟಪಗಳಿರುವ ಈ ಕಟ್ಟಡವನ್ನು ೧೯೯೭-೯೮ರ ಸಾಲಿನ ನೋಂದಣಿ ಶುಲ್ಕದ ಅನುದಾನದಲ್ಲಿ ನಿರ್ಮಿಸಲಾಗಿದ್ದು, ಇದಕ್ಕೆ ಸಭಾ ಭವನ ಎಂದು ಕರೆಯುತ್ತಾರೆ. ಗರ್ಭಗೃಹದಲ್ಲಿ ಪ್ರಾಚೀನ ಲಿಂಗವನ್ನು ಪ್ರತಿಷ್ಠಾಪಿಸಿದ್ದಾರೆ. ಹೊರಭಾಗದಲ್ಲಿ ಹಳೆಯ ಶಿಲ್ಪಾವಶೇಷಗಳು ಕಂಡುಬರುತ್ತವೆ.

ಸಂಖ್ಯೆ : ೧೯

ಸ್ಥಳ : ಕವಲಗೇರಿ

ಸ್ಥಳನಿರ್ದೇಶನ : ಊರ ನಡುವೆ

ಸ್ಮಾರಕ : ಕಲ್ಮೇಶ್ವರ ಗುಡಿ

ಅಭಿಮುಖ : ಪೂರ್ವಾಭಿಮುಖ

ಕಾಲಮಾನ : ಆಧುನಿಕ

ಶೈಲಿ : ಸ್ಥಳೀಯ

ಸ್ಥಿತಿ : ಕನಿಷ್ಠ

**ಸ್ಮಾರಕದ ವಿವರ:**

ಕಲ್ಮೇಶ್ವರ ದೇವಾಲಯವು ಸ್ಥಳೀಯ ಶೈಲಿಯಲ್ಲಿ ನಿರ್ಮಿಸಿರುವ ಗರ್ಭಗೃಹ ಮತ್ತು ಸಭಾಮಂಟಪಗಳಿರುವ ದೇವಾಲಯವಿದು. ಗರ್ಭಗೃಹದಲ್ಲಿರುವ ಲಿಂಗ ಹಳೆಯದು.

ಸಭಾಮಂಟಪದಲ್ಲಿರುವ ನಂದಿಶಿಲ್ಪ ಇತ್ತೀಚಿನದು ಹಳೆಯ ನಂದಿಶಿಲ್ಪ ಭಗ್ನಗೊಂಡಿದ್ದು ಇಲ್ಲಿನ ಶಿವಾನಂದಮಠದ ಹಿಂಭಾಗದಲ್ಲಿ ಇಟ್ಟದ್ದಾರೆ. ದೇವಾಲಯದ ಗೋಡೆಯಲ್ಲಿ ಗಜಲಕ್ಷ್ಮೀ ಶಿಲ್ಪ ಫಲಕವನ್ನು ಅಳವಡಿಸಿದ್ದಾರೆ, ಫಲಕದ ಮೇಲ್ಭಾಗದಲ್ಲಿ ಸೂರ್ಯನನ್ನು ಸಂಕೇತಿಸುವ ವೃತ್ತಾಕಾರದ ಗೆರೆಯ ಚಿತ್ರಗಳನ್ನು ಕಾಣಬಹುದಾಗಿದೆ.

| | | |
|---|---|---|
| ಸಂಖ್ಯೆ | : | ೨೦ |
| ಸ್ಥಳ | : | ಮೆರೆವಾಡ |
| ಸ್ಮಾರಕ | : | ಬಸವಣ್ಣ ದೇವಾಲಯ |
| ಸ್ಥಳನಿರ್ದೇಶನ | : | ಊರ ನಡುವೆ |
| ಕಾಲಮಾನ | : | ಕ್ರಿ.ಶ. ೧೧ನೆಯ ಶತಮಾನ |
| ಅಭಿಮುಖ | : | ಪೂರ್ವಾಭಿಮುಖ |
| ಶೈಲಿ | : | ಕಲ್ಯಾಣ ಚಾಲುಕ್ಯ |

**ಸ್ಮಾರಕದ ವಿವರ:**

ಬಸವಣ್ಣ ದೇವಾಲಯವು ಜೀರ್ಣೋದ್ಧಾರಗೊಂಡಿದ್ದು ಕ್ರಿ.ಶ. ೧೧ನೆಯ ಶತಮಾನ ಕ್ರಿ.ಶ. ೧೧೬೦ರಲ್ಲಿ ಕಲ್ಯಾಣ ಕ್ರಾಂತಿಯ ನಂತರ ಕೆಲವು ವಚನಕಾರರು ತಮ್ಮ ಅಮೂಲ್ಯ ಹಸ್ತಗ್ರಂಥಗಳನ್ನು ಕಾಪಾಡುವ ಉದ್ದೇಶದಿಂದ ಚನ್ನಬಸವಣ್ಣ ಸೇರಿದಂತೆ ಹಲವಾರು ವಚನಕಾರರು ಮರೆವಾಡ ಗ್ರಾಮಕ್ಕೆ ಬಂದ ಕುರುಹುಗಳಿವೆ. ಅಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿದ್ದಾರೆ. ಅವರ ಕಾಲದಲ್ಲಿ ನಿರ್ಮಿತವಾದ ಬಸವಣ್ಣ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಒಳಗೊಂಡಿದ್ದು, ದೇವಾಲಯದ ಆವರಣದಲ್ಲಿ ಸಪ್ತಮಾತೃಕೆಯ ಶಿಲ್ಪ, ಗಣಪತಿ, ನಾಗ ಮತ್ತಿತರ ಶಿಲ್ಪಾವಶೇಷಗಳನ್ನು ಇಂದಿಗೂ ಪೂಜಿಸುತ್ತಾರೆ. ಆವರಣದಲ್ಲಿ ಅನುಭವ ಮಂಟಪವಿದ್ದು, ಅಲ್ಲಿ ಮದುವೆ ಸಮಾರಂಭ ನಡೆಯುತ್ತದೆ. ಮತ್ತು ಚೆನ್ನಬಸವಣ್ಣನವರು ಹಚ್ಚಿದ ಆಶೀರ್ವಾದದ ಗಿಡಗಳನ್ನು ಕಾಣಬಹುದಾಗಿದೆ. ಈ ಗುಡಿ ಪುರಾತನವಾಗಿದ್ದು, ಇಲ್ಲಿರುವ ಸಪ್ತಮಾತೃಕೆಯ ಶಿಲ್ಪವನ್ನು ೦೮-೦೪-೨೦೦೫ ರಂದು ನಿಂಗದ ವೀರಬಸವ ಕೆಂಗಾನೂರು ಇವರಿಂದ ಪ್ರತಿಷ್ಠಾಪನೆಗೊಂಡಿದೆ. ತಿಮ್ಮಾಪುರದಲ್ಲಿ ಮಾರಿಕಾಂಬ ದೇವಿಯ ಗುಡಿಯಿದ್ದು ಸ್ಥಳೀಯ ಕುರುಬ ಸಮುದಾಯ ನಿಷ್ಠೆಯಿಂದ ನಡೆದುಕೊಳ್ಳುತ್ತಾರೆ. ಹನುಮಂತ ದೇವರ ಗುಡಿ ಇದೆ.

ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ದಿನಾಲೂ ಪೂಜೆಗೆ ಒಳಪಡುತ್ತದೆ. ಎದುರುಗಡೆ ದೀಪಸ್ತಂಭ ಇದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಆಧುನಿಕ ಶೈಲಿಯ ಅನೇಕ ದೇವಾಲಯಗಳು ಕಂಡುಬರುತ್ತವೆ. ಗ್ರಾಮದೇವತೆಯಾಗಿ ಪೂಜಿಸಲ್ಪಡುವ ದುರ್ಗವ್ವ ದ್ಯಾಮವ್ವನಿಗೆ ಇಲ್ಲಿ ವಿಶೇಷ ಪ್ರಾಶಸ್ತ್ಯವಿದೆ. ಹನುಮಂತ ದೇವಾಲಯ, ಬಸವಣ್ಣದೇವರ ಗುಡಿಗಳು, ವೆಂಕಟರಮಣ ದೇವಾಲಯ, ವೀರಭದ್ರಗುಡಿ, ಮೂಗಬಸವೇಶ್ವರ, ಸಂಗಮೇಶ್ವರ ಬರುತ್ತವೆ. ಪಾಚೀನ ಮತ್ತು ಆಧುನಿಕ ದೇವಾಲಯಗಳಿಗೆ ದಿನಾಲೂ ಪೂಜೆ ಪುರಸ್ಕಾರ ನಡೆಯುತ್ತವೆ. ಹಬ್ಬ ಹರಿದಿನಗಳಲ್ಲಿ ವಿಶೇಷ ಪೂಜೆಗಳನ್ನು ನಡೆಸಿ, ಭಯ-ಭಕ್ತಿಯಿಂದ ನಡೆದುಕೊಳ್ಳುವದನ್ನು ಗಮನಿಸಬಹುದಾಗಿದೆ.

ಅಮ್ಮಿನಭಾವಿ ಪ್ರದೇಶದಲ್ಲಿ ನೋಡಬಹುದಾದ ಬಹುಮುಖ್ಯ ಕಟ್ಟಡಗಳಲ್ಲಿ ಅಮ್ಮಿನಭಾವಿಯ ಗವಿಯು ಕೂಡಾ ಒಂದಾಗಿದೆ. ಇದನ್ನು ಕ್ರಿ.ಶ. ೧೯೬೭ರಲ್ಲಿ ಪೂರ್ವದಲ್ಲಿರಬಹುದೆಂದು ಊರಿನ ಗ್ರಾಮಸ್ತರು ಹೇಳುತ್ತಾರೆ. ಮೊದಲಿಗೆ ಒಬ್ಬ ಸ್ವಾಮಿಜಿ ವಾಸವಾಗಿದ್ದ ಅವರು ಅಲ್ಲಿ ನಿಧನ ಹೊಂದಿದರು. ಅಲ್ಲಿ ಅವನ ಗದ್ದುಗೆ ಸ್ಥಾಪಿಸಲಾಗಿದೆ. ಪ್ರಸ್ತುತ ಈ ಗವಿಯಲ್ಲಿ ಒಬ್ಬ ಸ್ವಾಮೀಜಿ ವಾಸವಾಗಿದ್ದಾರೆ. ಗವಿಯು ಗರ್ಭಗೃಹ ಅಂತರಾಳವನ್ನು ಹೊಂದಿತ್ತು. ಸಂಪೂರ್ಣವಾಗಿ ಕಲ್ಲಿನಿಂದ ಆವೃತ್ತವಾಗಿದೆ. ಗರ್ಭಗೃಹದಲ್ಲಿ ಈಶ್ವರನಮೂರ್ತಿ ಇದ್ದು, ಗರ್ಭಗೃಹದಿಂದ ಅಂತರಾಳದವರೆಗೆ ಬಾಗಿಲುವಾಡದಲ್ಲಿ ಕೀರ್ತಿಮುಖದ ಅಲಂಕರಣೆಯಿಂದ ಕೂಡಿದೆ, ಅಂತರಾಳದಲ್ಲಿ ಪೀಠ ಇದ್ದು, ಶಿವಲಿಂಗವಿದೆ. ಪೀಠದಲ್ಲಿ ಖುಗೇದ ಎನ್ನುವ ಹೆಸರಿದೆ. ಎಡ-ಬಲಗಳಲ್ಲಿ ಖಾಲಿಕೋಷ್ಟಕಗಳಿವೆ. ಮುಂದೆ ಬಂದರೆ ನಂದಿಯು ಶಿವನಿಗೆ ಅಭಿಮುಖವಾಗಿದೆ. ನಂತರ ಮೂರು ಮೆಟ್ಟಿಲು ಏರಿದರೆ ಬಾಗಿಲುವಾಡದಲ್ಲಿ ಕಮಾನಿನಾಕಾರದಲ್ಲಿದೆ. ಗವಿಯ ಎಡಭಾಗದಲ್ಲಿ ನೆಲಮಾಳಿಗೆ ಹಾಗೆ ಇದ್ದು, ಸಂಪೂರ್ಣ ಮಣ್ಣಿನಿಂದ ಆವೃತ್ತವಾಗಿದೆ. ಮತ್ತೆ ನಾಲ್ಕು ಮೆಟ್ಟಿಲು ಇಳಿದರೆ ತುಂಬಾ ಕತ್ತಲೂ ಮುಂದೆ ಸಾಗಿದರೆ ನಕ್ಷತ್ರಾಕಾರದ ಯಜ್ಞ ಕುಂಡ ಗೋಚರಿಸುವದು. ಈ ನೆಲಮಾಳಿಗೆಯ ದಕ್ಷಿಣ ದಿಕ್ಕಿನಲ್ಲಿ ಯೋಗಿಗಳು ತಪಸ್ಸುಮಾಡುವ ಒಂದು ಸ್ಥಳವಿದೆ. ಯಜ್ಞಕುಂಡದ ಪೂರ್ವಕ್ಕೆ ಮಣ್ಣಿನ ಪೀಠವಿದ್ದು ಅದರ ಮೇಲೆ ಐದು ಹೆಡೆಯ ನಾಗರಹಾವು ಉದ್ಭವವಾಗಿದೆ. ಅಲ್ಲಿ ಸ್ವಾಮಿಗಳು ೧೯೬೭ರ ಅವಧಿಯಲ್ಲಿ ವಿಭೂತಿ ಲಿಂಗವನ್ನು ಅದರ ಮುಂದೆ ಇಟ್ಟಿದ್ದಾರೆ.

ಈ ಗವಿಯು ಮಣ್ಣಿನಿಂದ ಆವೃತ್ತವಾಗಿದ್ದು ಗರ್ಭಗೃಹ ಮತ್ತು ಅಂತರಾಳ ಮಾತ್ರ ಕಲ್ಲಿನಿಂದ ನಿರ್ಮಿತವಾಗಿದೆ.

**ಬಸದಿಗಳು:**

ಧಾರವಾಡ ತಾಲೂಕಿನ ಜೈನ ಕೇಂದ್ರಗಳೆಂದರೆ, ಅಮ್ಮಿನಭಾವಿ, ಅಳ್ನಾವರ, ಗರಗ, ತಡಕೋಡ, ನರೇಂದ್ರ, ಮನಗುಂಡಿ ಮುಗದ, ಹೆಬ್ಬಳ್ಳಿಗಳು ಮುಖ್ಯವಾಗಿವೆ. ಇವುಗಳಲ್ಲಿ ಅಮ್ಮಿನಭಾವಿ ನರೇಂದ್ರ, ಹೆಬ್ಬಳ್ಳಿ ಪ್ರದೇಶಗಳು ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಒಳಪಡುತ್ತದೆ. ಶಾಸನಗಳ ಹಿನ್ನಲೆಯಲ್ಲಿ ಅಮ್ಮಿನಭಾವಿ ಜೈನಕೇಂದ್ರ ಮತ್ತು ಅಗ್ರಹಾರವಾಗಿತ್ತು. ಈ ಊರಿಗೆ ಸಂಬಂಧಿಸಿದಂತೆ ೧೨ನೆಯ ಶತಮಾನದ ಚಂದ್ರನಾಥ ತೀರ್ಥಂಕರನ ಪಾದಪೀಠದ ಮೇಲಿರುವ ಶಾಸನವನ್ನು (೬:೨೦೦೦) ಬಿಟ್ಟರೆ ದೊರೆಯುವುದು ಕ್ರಿ.ಶ.೧೮೯೨ರ ನೇಮಿನಾಥ ತೀರ್ಥಂಕರನ ಪಾದಪೀಠದ ಶಾಸನ (೮:೧೨೮೪) ಜೈನಬಸದಿ ಜೈನಸಮಾಜಗಳ ಪ್ರಾಚೀನತೆಯ ಹಿನ್ನಲೆ ಇರುವ ಈ ಗ್ರಾಮದಲ್ಲಿ ವಿಸ್ತಾರವಾದ ಜೈನಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ಲಭಿಸಿದುದು ವಿಚಾರಾರ್ಹ ಅಂಶವಾಗಿದೆ. ನೇಮಿನಾಥ ಬಸದಿಯ ಮೇಲ್ಛಾವಣಿಯಲ್ಲಿ ಹಾಕಲಾದ ಶಾಸನ ಕುಂದೂರು ೫೦೦ರ ಅಗ್ರಹಾರವಾದ ಅಮ್ಮಿನಭಾವಿಯ ೪೦೦ ಮಹಾಜನರ ಸನ್ನಿಧಿಯಲ್ಲಿ ಕೈಗೊಂಡ ದಾನವನ್ನು ಸೂಚಿಸಿದೆ.[೨೧] ಕ್ರಿ.ಶ. ೧೧೪೬ ಶಾಸನವೊಂದು (೪:೧೧೪೬) ನೇಮಿನಾಥ ಬಸದಿಯ ಮುಂದಿನ ಕಟ್ಟೆಯ ಹತ್ತಿರ ಬಿದ್ದಿದೆ. ಜೈನಬಸದಿಯ ಚಂದ್ರನಾಥ ತೀರ್ಥಂಕರರ ಪಾದಪೀಠದ ಮೇಲೆ ಎರಡು ಸಾಲುಗಳಲ್ಲಿ ಬರೆದ ಗದ್ಯ ಶಾಸನ (೬:೧೨) ಮೂಲಸಂಘ, ಸೇವಗಣದ ಪಾರಿಸಸೆಟ್ಟಿಯರ ಮಗ ಬಮ್ಮಿಸೆಟ್ಟಿ, ಚಂದ್ರನಾಥ ಸ್ವಾಮಿಗಳ ಪ್ರತಿಮೆಯನ್ನು ಈ ಬಸದಿಗೆ ಮಾಡಿಸಿಕೊಟ್ಟ ವಿಷಯ ತಿಳಿಸಿವೆ.[೨೨] ಇದೇ ಗ್ರಾಮದ ಕ್ರಿ.ಶ. ೧೮೯೨ರ ಶಾಸನ ಅಮ್ಮಿನಭಾವಿ ಗ್ರಾಮದ ನೇಮಿತೀರ್ಥಂಕರ ಮೂರ್ತಿಯ ಪಾದತೀರದ ಮೇಲೆ ಬಲ್ಲಾಳ ರಾಮ ವಡೇರು ನೇಮಿತೀರ್ಥಂಕರರ ವಿಗ್ರಹವನ್ನು ಪ್ರತಿಷ್ಠಾಪಿಸಿದನ್ನು ತಿಳಿಸುತ್ತದೆ.[೨೩]

| | | |
|---|---|---|
| ಸ್ಥಳ | : | ಅಮ್ಮಿನಭಾವಿ |
| ಸ್ಮಾರಕ | : | ನೇಮಿನಾಥ ಜಿನಾಲಯ |
| ಪಂಥ | : | ಜೈನ |
| ಸ್ಥಳ ನಿರ್ದೇಶನ: | | ಊರ ನಡುವೆ |
| ಅಭಿಮುಖ | : | ಪೂರ್ವಾಭಿಮುಖ |
| ಕಾಲಮಾನ | : | ಕ್ರಿ.ಶ. ೧೨ ರಿಂದ ೧೩ನೆಯ ಶತಮಾನ |

ರಾಜವಂಶ : ಕಲ್ಯಾಣ ಚಾಲುಕ್ಯ

ಶೈಲಿ : ಕಲ್ಯಾಣ ಚಾಲುಕ್ಯ

**ಸ್ಮಾರಕದ ವಿವರ:**

ಪ್ರಸ್ತುತ ಅಮ್ಮಿನಭಾವಿಯಲ್ಲಿರುವ ನೇಮಿನಾಥ ಜಿನಾಲಯವೇ ಶಾಸನೋಕ್ತ ಬಸದಿಯಾಗಿದೆ. ಈ ಜಿನಾಲಯವು ಪೂರ್ವಾಭಿಮುಖವಾಗಿದ್ದು, ತಲವಿನ್ಯಾಸವು ಗರ್ಭಗೃಹ, ಅಂತರಾಳ, ನವರಂಗ ಮತ್ತು ಸಭಾಮಂಟಪದಿಂದ ಕೂಡಿದೆ. ಗರ್ಭಗೃಹದಲ್ಲಿ ನೇಮಿನಾಥ ಶಿಲ್ಪವಿದೆ. ಇದನ್ನು ಕಪ್ಪುಶಿಲೆಯಲ್ಲಿ ಕಂಡರಿಸಲಾಗಿದೆ. ಪದ್ಮಾಸನದಲ್ಲಿರುವ ನೇಮಿನಾಥ ತೀರ್ಥಂಕರನು ಧ್ಯಾನ ಮುದ್ರೆಯಲ್ಲಿದ್ದಾನೆ. ಪೀಠದಲ್ಲಿ ಈತನ ಲಾಂಛನ ಶಂಖದ ನಿರೂಪಣೆ ಇದೆ. ಗರ್ಭಗೃಹದ ನಾಲ್ಕು ಮೂಲೆಯಲ್ಲಿ ನಾಲ್ಕು ಅರ್ಧಗಂಬಳಿವೆ. ವಿತಾನದ ಮಧ್ಯದಲ್ಲಿ ಪದ್ಮಮಂಡಲದ ಅಲಂಕಾರವಿದೆ. ದ್ವಾರಬಂದವು ಯಾವುದೇ ಬಗೆಯ ಶಾಖಾಲಂಕಾರಗಳಿಲ್ಲದೆ ನಿರಲಂಕೃತವಾಗಿದೆ.

ಅಂತರಾದಲ್ಲಿ ಪಾರ್ಶ್ವನಾಥ, ಚಾವ್ವೀಸ್, ತೀರ್ಥಂಕರರ ಪ್ರಭಾವಳಿಯುಳ್ಳ ಆದಿನಾಥ ತೀರ್ಥಂಕರನ ಶಿಲ್ಪವು ಜಿನಾಲಯದ ಮುಂಭಾಗದಲ್ಲಿದ್ದ ಹಾಳು ಬಾವಿಯೊಂದನ್ನು ಮುಚ್ಚಲು ಸುತ್ತಲಿನ ಮಣ್ಣನ್ನು ಅಗೆಯುತ್ತಿದ್ದ ಸಮಯದಲ್ಲಿ ಕ್ರಿ.ಶ. ೧೯೯೯ರಲ್ಲಿ ದೊರೆತಿದೆ. ಚಂದ್ರಪ್ರಭ ಅಥವಾ ಮಹಾವೀರ ಶಿಲ್ಪಗಳು ಅಂತರಾಳದಲ್ಲಿ ಕಂಡುಬರುತ್ತದೆ. ಅಂತರಾಳದ ಒಳಭಿತ್ತಿ ಮತ್ತು ವಿತಾನದ ರಚನೆಯ ಲಕ್ಷಣಗಳೂ ಗರ್ಭಗ್ರಹದ ರಚನೆಯಾಗಿವೆ. ಮೇಲ್ಭಾವಣೆಯಲ್ಲಿ ಶಾಸನ ಇದೆ.

ನವರಂಗದ ಮಧ್ಯದಲ್ಲಿ ನಾಲ್ಕು ಸ್ವತಂತ್ರ ರುದ್ರಕಾಂತ ಪ್ರಕಾರದ ಸ್ತಂಭಗಳಿವೆ.[೨೪] ಇವು ಕ್ರಮವಾಗಿ ಪೀಠ, ಪಾದ, ದಂಡ, ಗ್ರೀವ, ಘಟ, ಕಂಠ ಮತ್ತು ಬೋದಿಗೆಗಳಿಂದ ಕೂಡಿವೆ. ಸುತ್ತಲು ಭಿತ್ತಿಗಳಲ್ಲಿ ಹನ್ನೆರಡು ಬ್ರಹ್ಮಕಾಂತ ಶೈಲಿಯ ಅರ್ಧಗಂಬಳಿವೆ. ವಿತಾನದ ಮಧ್ಯದಲ್ಲಿರುವ ಪದ್ಮಮಂಡಲದ ಅಲಂಕಾರ ರಚನೆ ಗಮನಾರ್ಹವಾಗಿದೆ. ನವರಂಗದಲ್ಲಿ ಅರಹನಾಥ, ಮಲ್ಲಿನಾಥ, ಮನುಷುರತ: ಮೂರ್ತಿ ಲೋಹಶಿಲ್ಪ ಉಳಿದಂತೆ ಇಪ್ಪತ್ತನಾಲ್ಕು ತೀರ್ಥಂಕರರ ಸೂಕ್ಷ್ಮ ಶಿಲ್ಪಗಳು ಕಂಡು ಬರುತ್ತವೆ. ಉತ್ತರ ಗೋಡೆಗೆ ಶಾಸನ ಇದೆ. ನವರಂಗಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ವಿಶಾಲವಾದ ಸಭಾಮಂಟಪವನ್ನು ಹೊಂದಿದೆ. ಇದನ್ನು ೧೯೮೪ರಲ್ಲಿ ಜಿನಾಲಯವನ್ನು ಜಿರ್ಣೋದ್ಧಾರ ಪಡಿಸುತ್ತಿದ್ದ ಸಂದರ್ಭದಲ್ಲಿ ನಿರ್ಮಿಸಲಾಗಿದೆ. ಇದರ ದ್ವಾರಬಂಧದ ಮುಂಭಾಗದಲ್ಲಿ ಚಂದ್ರಶಿಲಾ ರಚನೆಯ ಅಲಂಕಾರವಿದೆ.

ಈ ಜಿನಾಲಯವು ಮೂಲತಃ ಚಂದ್ರನಾಥನ ಜಿನಾಲಯವಾಗಿತ್ತು, ಕಾರಣ, ಇದು ಅಂತರಾಳದಲ್ಲಿರುವ ಚಂದ್ರಪ್ರಭನಾಥ ತೀರ್ಥಂಕರನ ಶಿಲ್ಪದಿಂದ ದೃಢಪಡುತ್ತದೆ.[೨೫] ತರುವಾಯ ಕ್ರಿ.ಶ. ಸುಮಾರು ೧೫ನೆಯ ಶತಮಾನದಲ್ಲಿ ಇದು ಶಾಂತಿನಾಥನ ಜಿನಾಲಯವೆಂದು ಪ್ರಸಿದ್ಧವಾಗಿತ್ತು. ಇದನ್ನು ಅಮ್ಮಿನಭಾವಿ ಗ್ರಾಮದವನೆ ಆದ ವಿಜಯಣ್ಣ ಕವಿಯು ತನ್ನ ದ್ವಾದಶಾನು ಪೇಕ್ಷ ಕೃತಿಯನ್ನು ಕ್ರಿ.ಶ. ೧೪೪೮ರಲ್ಲಿ ಪುರದ ಶಾಂತನಾಥ ಜಿನಾಲಯದಲ್ಲಿ ಬರೆದು ಪೂರ್ಣಗೊಳಿಸಿದ ಸಂಗತಿ ಸ್ಪಷ್ಟಪಡಿಸುತ್ತದೆ.[೨೬] ನಂತರ ೧೯೯೨ರಲ್ಲಿ ಸ್ಥಳೀಯ ದಿವಂಗತ ಬಲ್ಲಾಳರಾವ ದೇಸಾಯಿ ಅವರು ರಾಜಸ್ಥಾನದ ಜಯಪೂರದಿಂದ ನೇಮಿನಾಥ ತೀರ್ಥಂಕರನ ಶಿಲ್ಪವನ್ನು ತಂದು ಈ ಜಿನಾಲಯದಲ್ಲಿ ಪ್ರತಿಷ್ಠಾಪಿಸಿದ ನಂತರ ಇದು ನೇಮಿನಾಥ ಜಿನಾಲಯವೆಂದು ಮರುನಾಮಕರಣ ಪಡೆದಂತೆ ತೋರುತ್ತದೆ.[೨೭]

ನೇಮಿನಾಥ ಜಿನಾಲಯದ ಮುಂಭಾಗದಲ್ಲಿರುವ ಮಾನಸ್ತಂಭವನ್ನು ಪರಮಪೂಜ್ಯ ಬಾಹುಬಲಿಮುನಿ ಮಹಾರಾಜರ ಪರಮ ಶಿಷ್ಯರಾದ ಆಚಾರ್ಯ ೧೦೮ ಶ್ರೀ ಧರ್ಮಸೇನ ಮುನಿ ಮಹಾರಾಜರ ಪ್ರೇರಣೆಯಿಂದ ಹುಬ್ಬಳ್ಳಿ ನಗರದ ದಿವಂಗತ ಸುವಾಸಭಹನ ಜೈನ ಅವರ ಪರೋಕ್ಷ ವಿನಯಾರ್ಥವಾಗಿ ಅವರ ಬಂಧುಗಳು ಮತ್ತು ಸ್ಥಳೀಯ ಶ್ರಾವಕ ಸಮುದಾಯವು ಸಂಯುಕ್ತವಾಗಿ ೧೯೯೧ರಲ್ಲಿ ನಿರ್ಮಿಸಿದ್ದಾರೆ. ಕೆಂಪು ಮರಳುಶಿಲೆಯಲ್ಲಿ ನಿರ್ಮಾಣವಾಗಿರುವ ಈ ಮಾನಸ್ತಂಭವು ೩೭ ಅಡಿ ಎತ್ತರವಾಗಿದೆ ೧೫ ಥ ೧೫ ಅಡಿ ಅಗಲದ ಮೂರು ಹಂತಗಳುಳ್ಳ ಚೌಕಾಕಾರವಾದ ಜಗಲಿ, ಮಧ್ಯದಲ್ಲಿ ವೃತ್ತಾಕಾರದ ಕಾಂಡ ಮತ್ತು ಮೇಲ್ಭಾಗದಲ್ಲಿ ಚತುರ್ಮುಖ ಮಂಟಪದಿಂದ ಕೂಡಿದೆ. ಈ ಮಂಟಪದಲ್ಲಿರುವ ಪದ್ಮಾಸೀನ ಚತುರ್ಮುಖ ತೀರ್ಥಂಕರರ ಶಿಲ್ಪವನ್ನು ಸ್ಥಳೀಯ ಶ್ರೀ ಸುಭಾಸ ನಿಂಗಪ್ಪ ದೇಸಾಯಿ ಅವರು ಮಾಡಿಸಿಕೊಟ್ಟಿದ್ದಾರೆ.[೨೮]

ಜಿನಾಲಯದ ಹೊರಭಾಗದಲ್ಲಿ ಬ್ರಹ್ಮದೇವರ ಗುಡಿ ಇದೆ. ಯಕ್ಷ-ಯಕ್ಷಿ ಮತ್ತು ನಾಗಶಿಲ್ಪಗಳಿವೆ. ಇನ್ನಿತರ ಭಗ್ನಗೊಂಡ ವ್ಯಾಳ, ವೀರಗಲ್ಲು, ಕೆಲ ಶಿಲ್ಪಗಳು ಕಂಡು ಬರುತ್ತವೆ. ಈ ಎಲ್ಲ ಅಂಸಗಳನ್ನು ಗಮನಿಸಿದರೆ ಊರಿನ ಶಿವಾಲಯವೊಂದರ ವಾಸ್ತು ಅವಶೇಷಗಳನ್ನು ತಂದು ಬಳಸಿರಬೇಕು.

ಸ್ಥಳ : ನರೇಂದ್ರ

ಸ್ಮಾರಕ : ಕೀರ್ತಿ ಜಿನಾಲಯ

ಪಂಥ : ಜೈನ

ಕಾಲಮಾನ : ೧೨ನೆಯ ಶತಮಾನ

ರಾಜವಂಶ : ಗೋವೆಯ ಕದಂಬ

**ಸ್ಮಾರಕದ ವಿವರ:**

ಕ್ರಿ.ಶ. ೧೨ನೆಯ ಶತಮಾನದ ಶಾಸನವು ನಂದೇಶ್ವರ ದೇವರಿಗೆ ನೀಡಿದ ಭೂಮಿಯ ಸೀಮಾ ಚಕ್ಕಬಂದಿಯನ್ನು ಸೂಚಿಸುತ್ತ "ಕೀರ್ತಿ ಜಿನಾಲಯದ ತೋಂಟದಿಂ ಮೂಡಣಪಾಳ ತೋಂಟ ಮುಂದೆ। ಬವಿವಿನ ಪಳ್ಳದಿಂ ಮೂಡ ಬೆಟ್ಟದ ಬಸದಿಯಂ ತೋಟದಿಂ ಬಡಗಣ ತೋಂಟ ಮುಮಂ" ಎಂದು ಕೀರ್ತಿ ಜಿನಾಲಯವನ್ನು ಉಲ್ಲೇಖಿಸಿದೆ.[೨೯] ಗೋವೆಯ ಕದಂಬ ಮನೆತನದ ಇಮ್ಮಡಿ ಜಯಕೇಶಿಯ ಪಟ್ಟದರಸಿ ಮೈಳಲದೇವಿಯ ಸ್ಥಳೀಯ ಕ್ರಿ.ಶ. ೧೨ನೆಯ ಶತಮಾನದ ಶಾಸನಗಳಿಂದ ತಿಳಿದುಬರುತ್ತದೆ. ಆದರೆ ಈ ಜಿನಾಲಯವು ಈಗ ಅಸ್ತಿತ್ವದಲ್ಲಿ ಇಲ್ಲ. ಅದು ಯಾವುದೋ ಒಂದು ಕಾಲಘಟ್ಟದಲ್ಲಿ ನಾಶವಾಗಿದೆ.

ಸ್ಥಳ : ನರೇಂದ್ರ

ಸ್ಮಾರಕ : ಬೆಟ್ಟದ ಬಸದಿ

ಪಂಥ : ಜೈನ

ಕಾಲಮಾನ : ೧೨ನೆಯ ಶತಮಾನ

ರಾಜವಂಶ : ಗೋವೆಯ ಕದಂಬ

**ಸ್ಮಾರಕದ ವಿವರ:**

ಕ್ರಿ.ಶ. ೧೨ನೆಯ ಶತಮಾನದ ಶಾಸನಗಳಿಂದ ನರೇಂದ್ರದಲ್ಲಿ ಬೆಟ್ಟದ ಬಸದಿಯನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೨೫ರ ಶಾಸನವು ಗೋವೆಯ ಕದಂಬ ಮನೆತನದ ಇಮ್ಮಡಿ ಜಯಕೇಶಿಯ (ಕ್ರಿ.ಶ. ೧೧೨೫-೧೧೪೭) ಪಟ್ಟದರಸಿ ಮೈಳಲದೇವಿಯ ಮನೆವೆಗ್ಗಡೆ ಸಿಂಗಣ ದಂಡನಾಯಕನು ತನ್ನ ತಂದೆ ಲಕ್ಷ್ಮಣನ ವಿನಯಾರ್ಥವಾಗಿ ಕುಂದೂರದಲ್ಲಿ (ನರೇಂದ್ರ) ನಿರ್ಮಿಸಿದ್ದ ಲಕ್ಷ್ಮಣೇಶ್ವರ ದೇವಾಲಯಕ್ಕೆ ದಾನ ಮಾಡಿದ ಭೂಮಿಯ ಸೀಮಾ ಚಕ್ಕಬಂದಿಯನ್ನು ಸೂಚಿಸುತ್ತ ಈ ಭೂಮಿಯ ಉತ್ತರದ ಸೀಮೆ ಬೆಟ್ಟದ ಬಸದಿಯ ಭೂಮಿ ಎಂದು ಉಲ್ಲೇಖಿಸಿದೆ.[೩೦] ನರೇಂದ್ರ ಗ್ರಾಮದಲ್ಲಿ ಬೆಟ್ಟದ ಉತ್ತರದಲ್ಲಿರುವ ಪರಿಸರದಲ್ಲಿ ಬಸದಿ ಇರುವ ಸಾಧ್ಯತೆಇದೆ. ಇಲ್ಲಿ ಕನಕಶಾಂತಿ ಮುನಿಗಳು ಸಲ್ಲೇಖನ ವ್ರತವನ್ನು ಸ್ವೀಕರಿಸಿ ಸಮಾದಿ ಮರಣವನ್ನಪ್ಪಿದ ವಿನಯಾರ್ಥವಾಗಿ ನಿಲ್ಲಿಸಿರುವ ನಿಷಿಧಿ ಶಾಸನವು ಈ ಬೆಟ್ಟದ ಮೇಲೆ ಇರುವುದು[೩೧] ಬಾಹುಬಲಿಮುನಿ ನಿಷಧಿಕಲ್ಲನ್ನು ನಿಲ್ಲಿಸಿದ ವಿಷಯಗಳು ಇದರಲ್ಲಿದೆ.

ಸ್ಥಳ : ಹೆಬ್ಬಳ್ಳಿ

ಸ್ಮಾರಕ : ಜಿನಾಲಯ

ಪಂಥ : ಜೈನ

ಸ್ಥಳ ನಿರ್ದೇಶನ : ಊರ ಪೂರ್ವ

ಅಭಿಮುಖ : ಉತ್ತರ

ಕಾಲಮಾನ : ೧೨ನೆಯ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯ

**ಸ್ಮಾರಕದ ವಿವರ:**

ಜಿನಾಲಯವು ಪ್ರಸ್ತುತ ಅಸ್ತಿತ್ವದಲ್ಲಿಲ್ಲ. ಪ್ರಾಯಶಃ ಹೆಬ್ಬಳ್ಳಿಯಲ್ಲಿರುವ ಚಂದ್ರಪರಮೇಶ್ವರಿ ದೇವಾಲಯವೇ ಈ ಗ್ರಾಮದಲ್ಲಿದ್ದ ಪ್ರಾಚೀನ ಜಿನಾಲಯವಾಗಿರುವ ಸಾಧ್ಯತೆಯಿದೆ. ಈ ದೇವಾಲಯವು ಕೂಡ ೧೨ನೆಯ ಶತಮಾನದಲ್ಲಿ ನಿರ್ಮಾಣವಾಗಿದೆ. ಇದರ ಗರ್ಭಗೃಹ ಮತ್ತು ಅಂತರಾಳ ನಾಶವಾಗಿ ನವರಂಗ ಮಾತ್ರ ಉಳಿದಿದೆ. ಇದರಲ್ಲಿ ಸ್ವತಂತ್ರ ರುದ್ರಕಾಂತ ಶೈಲಿಯ ಸ್ತಂಭಗಳಿವೆ.

ಕ್ರಿ.ಶ. ೧೯೮೧ರಲ್ಲಿ ಸ್ಥಳೀಯ ಚಂದ್ರಪರಮೇಶ್ವರಿ ದೇವಾಲಯದ ಹಿಂಭಾಗದ ಕೆರೆಯಂಗಳದಲ್ಲಿ ಅಗೆಯುತ್ತಿದ್ದ ಸಂದರ್ಭದಲ್ಲಿ ಮುಂಡಭಾಗ ಒಡೆದು ಹೋಗಿರುವ ತೀರ್ಥಂಕರ ಮತ್ತು ಬಾಹುಬಲಿಯ ಶಿಲ್ಪಗಳು ದೊರೆತಿವೆ.[೩೨] ಈ ಸಂದರ್ಭದಲ್ಲಿ ಗ್ರಾಮದ ದಕ್ಷಿಣದಲ್ಲಿರುವ ಬೆಟ್ಟದ ಮೇಲೆ ಪಂಚಲೋಹದ ತೀರ್ಥಂಕರನ ಪ್ರತಿಮೆ ದೊರೆತಿದೆ. ಈ ಗ್ರಾಮದಲ್ಲಿ ಒಂದು ಜೈನಶಾಸನ ದೊರೆತಿದೆ. ಇದು ಯಾಪನೀಯ ಸಂಘ ಪುನ್ನಾಗವೃಕ್ಷ ಮೂಲಗುಣದ ಉಲ್ಲೇಖ ಮಾಡುತ್ತದೆ.[೩೩]

**ಮೂರ್ತಿಶಿಲ್ಪಗಳು:**

ಭಾರತೀಯ ಶಿಲ್ಪಕಾರರು ಪಾಶ್ಚಾತ್ಯ ಕಲೆಗಾರರ ಪ್ರಭಾವದಿಂದ ಹೊಸ-ಹೊಸ ಮಾರ್ಗ ತಂತ್ರ ಮತ್ತು ವಸ್ತುಗಳನ್ನು ಅಳವಡಿಸಿಕೊಳ್ಳುತ್ತಿರುವರು. ಆದ್ದರಿಂದ ಭಾರತೀಯ ಶಿಲ್ಪ ಬೆಳವಣಿಗೆಯೆಂದರೆ ಧರ್ಮದಿಂದ ಪ್ರಭಾವಿತವಾದ ಮೂರ್ತಿಶಿಲ್ಪದ ಬೆಳವಣಿಗೆ ಎಂದೇ ಹೇಳಬೇಕಾಗುತ್ತದೆ. ವಾಸ್ತುಶಿಲ್ಪಗಳಷ್ಟೆ ಪ್ರಾಮುಖ್ಯತೆಯನ್ನು ಮೂರ್ತಿಶಿಲ್ಪಗಳು ಸಹ ಹೊಂದಿದೆ. ಕರ್ನಾಟಕದ ಪ್ರಾಚೀನ ದೇವಾಲಯಗಳ ಹೊರಗೆ ಮತ್ತು ಒಳಗೆ ಹಲವು ರೀತಿಯ ಶಿಲ್ಪಗಳು ಗೋಚರಿಸುತ್ತವೆ. ದೇವಾಲಯಗಳಲ್ಲಿ ಮಾತ್ರವಲ್ಲದೆ ಹಲವು ಸ್ಥಳಗಳಲ್ಲಿ ಶಾಸನ ಶಿಲ್ಪಗಳು ಉಬ್ಬು ಶಿಲ್ಪದ ಮಾದರಿಯಲ್ಲಿ ಕಂಡು ಬರುತ್ತವೆ. ದೇವಾಲಯಗಳ

ಸೌಂದರ್ಯವನ್ನು ಹೆಚ್ಚಿಸಲು ಶಿಲ್ಪಗಳು ತುಂಬಾ ಸಹಾಯಕಾರಿಯಾಗಿವೆ. ಮೂರ್ತಿಶಿಲ್ಪ ಕಲೆಯು ಪ್ರಾಗೈತಿಹಾಸಿಕ ಕಾಲದಿಂದಲೂ ಬೆಳದು ಬಂದಿದೆ. ಶಿಲ್ಪವೆನ್ನುವುದು ಉದ್ದ, ಅಗಲ ಹಾಗೂ ದಪ್ಪಗಳೆಂದು ಮೂರು ಮಾನಗಳನ್ನು ಹೊಂದಿರುತ್ತದೆ. ವಿಗ್ರಹಗಳನ್ನು ಸಾಮಾನ್ಯವಾಗಿ 'ಮೂರ್ತಿಶಿಲ್ಪ' ಎನ್ನುತ್ತಾರೆ. ಶಿಲ್ಪಗಳನ್ನು ಮುಖ್ಯವಾಗಿ ಶಿಲೆ, ಮರ, ಲೋಹ, ಮಣ್ಣು ಹಾಗೂ ಮೇಣಗಳಿಂದ ತಯಾರಿಸಲಾಗುತ್ತದೆ. ಶಿಲ್ಪಗಳ ತಯಾರಿಕೆಯಲ್ಲಿರುವ ಪ್ರಮಾಣ ಹಾಗೂ ಗಾತ್ರಗಳು ಸೌಂದರ್ಯವನ್ನು ನಿರ್ಧರಿಸುತ್ತದೆ. ಶಿಲ್ಪಗಳಿಗೆ ದೇವಾಲಯಗಳಿಗಿಂತ ಪುರಾತನವಾದ ಇತಿಹಾಸವಿದೆ. ಇವುಗಳು ಪೂಜೆಗೊಳಪಡುವ ಬಿಡಿ ಶಿಲ್ಪಗಳು, ಮೂರ್ತಿಗಳು, ಕಂಬ, ಭಿತ್ತಿ ಹಾಗೂ ಶಿಖರಗಳಲ್ಲಿರುವ ಉಬ್ಬು ಶಿಲ್ಪಗಳು ಹಾಗೂ ಶಿಲಾಫಲಕಗಳ ಮೇಲೆ ಕೆತ್ತಿದ ಆಕೃತಿಗಳೆಲ್ಲವೂ ಶಿಲ್ಪಗಳಲ್ಲಿಯೇ ಬರುತ್ತದೆ. ಸಾಮಾನ್ಯವಾಗಿ ಮೂರ್ತಿ ಶಿಲ್ಪಗಳನ್ನು ದೇವಾಲಯದ ಗರ್ಭಗೃಹ, ನವರಂಗ, ದೇವಕೋಷ್ಠ, ಶಿಖರದ ಭಾಗ, ದೇವಾಲಯದ ಹೊರಭಾಗ, ಹೀಗೆ ಕೆಲವು ಕಡೆ ಪ್ರತಿಷ್ಠಾಪಿಸಿರುವುದು ಕಂಡು ಬರುತ್ತದೆ. ವಾಸ್ತುಶಿಲ್ಪದ ದೃಷ್ಟಿಯಿಂದ ಪ್ರಮುಖವಾಗಿ ಇದೇ ಅಂಶ ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ದೇವಾಲಯದ ಗರ್ಭಗುಡಿಯಲ್ಲಿರುವ ಮೂಲದೇವತೆಗೆ ಸಂಬಂಧಿಸಿದಂತೆ ಉಪದೇವತೆಗಳನ್ನು ಕೆತ್ತುತ್ತಿದ್ದರು. ದೇವಾಲಯಕ್ಕೆ ಹೆಚ್ಚಿನ ಸೌಂದರ್ಯ ಬರಲಿ ಎಂಬ ಕಾರಣಕ್ಕಾಗಿ ಇಂತಹ ಮೂರ್ತಿಶಿಲ್ಪಗಳನ್ನು ರಚಿಸಿರುವುದುಂಟು ಒಟ್ಟಿನಲ್ಲಿ ಲೌಕಿಕ ಮತ್ತು ಅಲೌಕಿಕ ಶಿಲ್ಪಗಳನ್ನು ಕಂಡರಿಸಿ, ಆ ಮೂಲಕ ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ಚಿತ್ರಣವನ್ನು ಪ್ರತಿಬಿಂಬಿಸುವ ಪ್ರಯತ್ನಗಳನ್ನು ಕಾಣುತ್ತೇವೆ. ಕೆಲವು ಶಿಲ್ಪಗಳು ಅಂದಿನ ಧಾರ್ಮಿಕತೆಯನ್ನು ಪ್ರತಿಬಿಂಬಿಸಿದರೂ ಮತ್ತೇ ಕೆಲವು ಶಿಲ್ಪಗಳು ಅಲೌಕಿಕ ಜೀವನದ ಮೌಲ್ಯಗಳನ್ನು ಸ್ಪಷ್ಟಪಡಿಸುತ್ತವೆ. ಅಂದಿನ ಕಾಲದ ಲಲಿತಕಲೆಗಳು ಇಂತಹ ಶಿಲ್ಪಗಳ ಮುಖಾಂತರ ನಮಗೆ ಮನವರಿಕೆಯಾಗಲು ಸಾಧ್ಯವಾಗುತ್ತದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಆದಿ ಇತಿಹಾಸ ಕಾಲದಿಂದ ವಿಜಯನಗರೋತ್ತರ ಕಾಲದವರೆಗಿನ ಶಿಲ್ಪಾವಶೇಷಗಳು ಧಾರವಾಡ ಪ್ರದೇಶದಲ್ಲಿ ಕಾಣಸಿಗುತ್ತವೆ. ಧಾರವಾಡ ಜಿಲ್ಲೆಯ (ಚಂದನಮಟ್ಟಿ) ಬೆನಕನಮಟ್ಟಿಯಲ್ಲಿ ಚಿಕ್ಕ ಕಳಸದ ಮೇಲೆ ಮೂವರು ಸ್ತ್ರೀಯರ ಸೂಕ್ಷ್ಮ ಉಬ್ಬು ಶಿಲ್ಪಗಳು ಆದಿ ಇತಿಹಾಸ ಕಾಲಕ್ಕೆ ನಿದೇಶಿಸಬಹುದಾಗಿದೆ. ಅಮ್ಮಿನಭಾವಿ ಪರಿಸರದಲ್ಲಿ ಹಲವಾರು ಶಿಲ್ಪಗಳು ಕಂಡುಬರುತ್ತದೆ. ಅವುಗಳಲ್ಲಿ ಜೈನ, ಶೈವ, ವೈಷ್ಣವ, ವೀರಗಲ್ಲು, ನಿಷಧಿಗಲ್ಲುಗಳು ಹಾಗೂ ಶಾಸನ ಶಿಲ್ಪಗಳು ಪ್ರಮುಖವಾಗಿವೆ. ಇವುಗಳು ನಿಂತಭಂಗಿಗಳು ಆಯುಧಗಳು, ವಸ್ತ್ರಾಲಂಕಾರ, ಆಭರಣಗಳು, ವಿವಿಧ ಮುದ್ರೆಗಳು,

ಅವುಗಳಿಗೆ ಸಂಬಂಧಿಸಿದ ವಾಹನಗಳೆಂದು ಪರಿಗಣಿಸಲ್ಪಡುವ ಪ್ರಾಣಿಪಕ್ಷಿಗಳ ಶಿಲ್ಪಗಳನ್ನು ಮುಖ್ಯ ಶಿಲ್ಪದ ಜೊತೆಗೆ ಕಂಡರಿಸಲಾಗಿದೆ.

ಈ ಪರಿಸರದಲ್ಲಿ ದೊರೆತ ಶಿಲ್ಪಗಳಲ್ಲಿ ಮುಖ್ಯವಾಗಿ ಶಿವಾಲಯಗಳಲ್ಲಿ ಶಿವ, ವಿಷ್ಣು, ಗಣೇಶ ಸಪ್ತಮಾತೃಕೆಯರು, ಲಕ್ಷ್ಮೀ, ಸರಸ್ವತಿ, ಭೈರವ, ಭೈರವಿ, ನಾಗಶಿಲ್ಪಗಳು ಗಜಲಕ್ಷ್ಮೀ, ಮಹಿಷಾಸುರ ಮರ್ದಿನಿ, ಆಂಜನೇಯ, ಸತ್ಯನಾರಾಯಣ, ಕನಕಾಂಬಿಕಾ, ಚಂದ್ರಿಕಾ ಪರಮೇಶ್ವರಿ, ವೀರಭದ್ರ, ಕಾರ್ತಿಕೇಯ ಶಿವಶರಣ ಮಾಚಿದೇವನ ಶಿಲ್ಪ ಮತ್ತಿತರ ಶಿಲ್ಪಗಳು ಕಂಡು ಬರುತ್ತದೆ. ಜೈನಶಿಲ್ಪಗಳಾದ ಜೈನ ತೀರ್ಥಂಕರ ನೇಮಿನಾಥ, ಪಾರ್ಶ್ವನಾಥ, ಆದಿನಾಥ, ಚಂದ್ರಪ್ರಭನಾಥ ಮುಂತಾದ ಮೂರ್ತಿಶಿಲ್ಪಗಳು ಕಂಡುಬಂದಿವೆ. ಇದರ ಜೊತೆಗೆ ವೀರಗಲ್ಲು, ನಿಷದಿಗಲ್ಲುಗಳು ಇರುವದನ್ನು ಗಮನಿಸಬಹುದಾಗಿದೆ.

**ಕಾಲ ಭೈರವನ ಶಿಲ್ಪ/ ಭೈರವ/ ಭೈರವಿಯ ಶಿಲ್ಪಗಳು:**

ಅಮ್ಮಿನಭಾವಿ, ಕನಕೂರು ಪ್ರದೇಶಗಳಲ್ಲಿ ಈ ಶಿಲ್ಪಗಳು ಕಂಡು ಬರುತ್ತದೆ. ಮಲ್ಲಿಕಾರ್ಜುನ ದೇವಾಲಯದ ನವರಂಗದ ದೇವಕೊಷ್ಟಗಳಲ್ಲಿ ಈ ಶಿಲ್ಪವು ಕಂಡುಬರುತ್ತವೆ. ದೇವಾಲಯದ ಉತ್ತರಕ್ಕೆ ಭೈರವನ ಶಿಲ್ಪವು ತ್ರಿಭಂಗಿಯಲ್ಲಿದೆ. ಕಲ್ಮೇಶ್ವರ ದೇವಾಲಯದಲ್ಲಿ ಭೈರವಿಯ ಶಿಲ್ಪ ಇರುವುದು ಕಂಡು ಬರುತ್ತದೆ.

ಭೂತ ಪ್ರೇತಗಳ ಉಚ್ಚಾಟನೆಗೆಂದು ಭೈರವನ ಪೂಜೆ ಪ್ರಸಿದ್ಧವಾಗಿದೆ. ಅವನದು ಅಪದುದ್ದರಣ ಮಂತ್ರ, ಕೈಯಲ್ಲಿ ಕಪಾಲವನ್ನು ಹಿಡಿದು ದಂಡಪಾಣಿಯಾಗಿ ಹಾವನ್ನು ಜನಿವಾರವನ್ನಾಗಿ ಧರಿಸಿ ಯಾಗವನ್ನು ನಾಶಪಡಿಸುವವನಾಗಿದ್ದಾನೆ. ಭೈರವನೆಂದರೆ ಭಯಾನಕ.

**ನಂದಿ ಶಿಲ್ಪಗಳು:**

ಶೈವ ಧರ್ಮದಲ್ಲಿ ಶಿವನಿಗಿಂತ ಹೆಚ್ಚಾಗಿ ಅವನ ವಾಹನವಾದ ನಂದಿಯು ಪೂಜೆಗೊಳಪಟ್ಟಿದೆ. ಶಿವನಿಗೆ ಪ್ರತೀಕವಾಗಿ ನಂದಿಯನ್ನು ಪೂಜಿಸುವ ವಾಡಿಕೆ. ಪ್ರತಿಯೊಂದು ಶೈವ ದೇವಾಲಯಗಳಲ್ಲಿ ಗರ್ಭಗೃಹದಲ್ಲಿದ್ದ ಶಿವಲಿಂಗಕ್ಕೆ ಅಭಿಮುಖವಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗುತ್ತಿದೆ.

ಪ್ರಸ್ತುತ ಅಧ್ಯಯನ ಪ್ರದೇಶವಾದ ಹೆಬ್ಬಳ್ಳಿಯಲ್ಲಿ ಬೃಹದಾಕಾರವಾದ ನಂದಿ ಶಿಲ್ಪವಿದೆ. ಒಟ್ಟು ಇದರ ಉದ್ದ ೧೩೦ ಸೆಂ.ಮೀ ಅಗಲ ೯೩ ಸೆಂ.ಮೀ ಕೊರಳಲ್ಲಿ ಗೆಜ್ಜೆಯ ಸರವಿದೆ, ೩೬ ಗಂಟೆಗಳು ಸ್ಪಷ್ಟವಾಗಿ ಕಾಣುತ್ತವೆ. ಕೋಡಿನ ಭಾಗವು ಸ್ವಲ್ಪ ಭಿನ್ನವಾಗಿದ್ದು ಕಂಡುಬರುತ್ತದೆ. ಬಾಲವು ಹೊಟ್ಟೆಯ ಹತ್ತಿರ ಬಂದಿದೆ. ಮುಂಗಾಲು ಬಲಗಾಲನ್ನು

ಮಡಚಿದ್ದು, ಸ್ಪಷ್ಟವಾಗಿ ಕಾಣುತ್ತದೆ. ಈ ನಂದಿಯು ಚೌಕಾಕಾರದ ಪೀಠದಲ್ಲಿದ್ದು ಇದರ ಎದುರಿಗೆ ಸಣ್ಣ ಒಂದು ಲಿಂಗವಿದೆ.

**ಗಣೇಶ ಶಿಲ್ಪ:**

ಈ ಶಿಲ್ಪ ಕುರುಡಾಪುರದ ವೀರಭದ್ರ ದೇವಸ್ಥಾನದ ಬಲಭಾಗದ ಕಮಾನಿನಲ್ಲಿದೆ. ಕ್ರಿ.ಶ. ೧೪ನೆಯ ಶತಮಾನದ್ದು, ಕಪ್ಪು ಶಿಲೆಯಿಂದ ಕಂಡರಿಸಿದ್ದಾರೆ. ಕುಬ್ಜ ಮೂರ್ತಿ, ಸೊಂಡಿಲು ಬಹಳ ದಪ್ಪವಾಗಿ ಹೊಟ್ಟೆ ದೊಡ್ಡದಾಗಿದೆ. ಪೀಠದ ಮೇಲೆ ಕುಳಿತ ವಿಗ್ರಹವಿದ್ದು ೪ ಕೈ ಹೊಂದಿದೆ. ಒಂದನೆಯ ಕೈಯಲ್ಲಿ ಹಾವು, ಎರಡನೆಯ ಕೈಯಲ್ಲಿ ಕೊಡಲಿ ಕೆಳ ಬಲಗೈ ಅಭಯ ಹಸ್ತ, ಇನ್ನೊಂದು ಕೈಯಲ್ಲಿ ಮೋದಕಪಾತ್ರೆ, ವಾಹನ ಇಲಿ ಅಕ್ಕಪಕ್ಕದಲ್ಲಿ ಪರಿವಾರ ದೇವತೆಗಳಾದ ನಾಗಲಿಂಗ ಇರುವದು ಕಂಡು ಬರುತ್ತದೆ.

**ವೀರಭದ್ರ ಶಿಲ್ಪ:**

ಕುರುಡಾಪುರ ದೇವಾಲಯದಲ್ಲಿ ವೀರಭದ್ರ ದೇವಾಲಯದ ದಕ್ಷಿಣಕ್ಕೆ ಇರುವ ಗರ್ಭಗೃಹದಲ್ಲಿ ಈ ಶಿಲ್ಪವು ಇದೆ. ಇದು ಉತ್ತರಕ್ಕೆ ಮುಖ ಮಾಡಿಕೊಂಡಿದ್ದು, ೪ ಕೈಗಳನ್ನು ಹೊಂದಿದೆ. ೧ನೆಯ ಕೈಯಲ್ಲಿ ಖಡ್ಗ, ಎರಡನೆಯ ಕೈಯಲ್ಲಿ ತ್ರಿಶೂಲ, ೩ನೆಯ ಕೈಯಲ್ಲಿ ಬಿಲ್ಲುಬಾಣ, ೪ನೆಯ ಕೈಯಲ್ಲಿ ಡೊಲು ಹಿಡಿದುರತ್ತಾನೆ. ಈ ಮೂರ್ತಿಯು ೫ ಅಡಿ ಎತ್ತರವಿದ್ದು, ದಿನನಿತ್ಯ ಪೂಜೆಗೊಳ್ಳುತ್ತಿದ್ದು ಸುಸ್ಥಿತಿಯಲ್ಲಿದೆ ಎನ್ನಬಹುದು. ವೀರಭದ್ರ ಶಿಲ್ಪಕ್ಕೆ ಕೀರ್ತಿಮುಖವಿದ್ದು, ಕಿರೀಟಧಾರಣೆ ಮಾಡಿದ್ದು, ಕೊರಳಲ್ಲಿ ರುದ್ರಾಕ್ಷಿ, ರುಂಡಗಳ ಮಾಲೆ, ಕಿವಿಕುಂಡಲಿ, ಪಾದರಕ್ಷೆ, ಟೊಂಕಕ್ಕೆ ಕಟಿಸೂತ್ರ, ಕಾಲಲ್ಲಿ ಕಡಗ ಮತ್ತು ಉಗ್ರವಾದ ನೇತ್ರವಿದೆ. ಇದು ಕೂಡಾ ಕಪ್ಪುಶಿಲೆಯಲ್ಲಿ ಕಂಡರಿಸಿದು. ೧೪ನೆಯ ಶತಮಾನದ್ದಾಗಿದೆ.

**ಈಶ್ವರ ಲಿಂಗಗಳು:**

ಪ್ರಸ್ತುತ ಅಧ್ಯಯನ ಪ್ರದೇಶದ ಎಲ್ಲ ಗ್ರಾಮಗಳಲ್ಲಿಯೂ ಶೈವ ದೇವಾಲಯಗಳು ಕಂಡು ಬರುತ್ತವೆ. ಇವು ಗರ್ಭಗೃಹದಲ್ಲಿ ಇರುತ್ತದೆ. ಇದರ ಪೀಠವು ಎತ್ತರವಾಗಿದ್ದು, ಬಹುಭಾಗ ಚೌಕಾಕಾರವಾಗಿದ್ದು, ಅದರ ಮಧ್ಯ ವಿಷ್ಣು ಭಾಗ ಸ್ವಲ್ಪ ಎತ್ತರ ದಪ್ಪವಿದ್ದು ಮೇಲೆ ರುದ್ರಭಾಗ ದುಂಡಾದ ಮೃದುವಾದ ಹೊಳಪಿನಿದ ಕೂಡಿದ್ದು, ಇದಕ್ಕೆ ನೀರು ಹರಿದು ಹೋಗಲು ವಿಶಾಲವಾದ ರಂಧ್ರವು ಗರ್ಭಗುಡಿಯ ಒಳಗಿನಿಂದ ಹೊರಗೆ ಕಲ್ಲಿನಲ್ಲಿ ಕೊರೆದಂತೆ ಇದೆ. ಇಂತಹ ಒಂದು ಶಿವಲಿಂಗ ಕುರುಡಾಪುರದಲ್ಲಿ ವೀರಭದ್ರನ ಗುಡಿಯೊಳಗೆ ಕಂಡುಬರುತ್ತದೆ.

**ಆಂಜನೇಯ ಶಿಲ್ಪ:**

ಆಂಜನೇಯ ಮೂರ್ತಿಯು ನಿಂತುಕೊಂಡಿದ್ದು ಎರಡು ಕೈ ಹೊಂದಿದೆ. ಒಂದು ಕೈ ಟೊಂಕದ ಮೇಲೆ ಇದ್ದು, ಇನ್ನೊಂದು ಕೈಯಲ್ಲಿ ಬೆಟ್ಟ ಹಿಡಿದಿದ್ದಾನೆ. ಕೊರಳಲ್ಲಿ ಹಾರ, ಕಾಲು ಮತ್ತು ಕೈಗಳಲ್ಲಿ ಕಡಗ ಯಜ್ಞೋಪವಿತ ಧರಸಿದೆ. ಬಾಲವು ತಲೆ ಮೇಲೆ ಹಾಯ್ದುಹೋಗಿದೆ. ಭಾವವು ತೀಕ್ಷ್ಣ ಸ್ವರೂಪದ್ದಾಗಿದೆ. ಇಂತಹ ಒಂದು ಶಿಲ್ಪವು ಕುರುಡಾಪುರ ದೇವಸ್ಥಾನದ ಎದುರಿಗೆ ಕಂಡುಬರುತ್ತದೆ.

**ಚಂದ್ರಿಕಾ ಪರಮೇಶ್ವರಿ ಶಿಲ್ಪ:**

ಹೆಬ್ಬಳ್ಳಿಯ ಚಂದ್ರಿಕಾಮರಮೇಶ್ವರಿ ದೇವಾಲಯದ ನವರಂಗದ ಕಮಾನಿನಲ್ಲಿ ಕಂಡುಬರುತ್ತದೆ. ಈ ಮೂರ್ತಿಯು ಚಿಕ್ಕದಾದ ಗದ್ದುಗೆಯ ಮೇಲೆ ಕುಳಿತಿದ್ದು ಒಂದು ಕೈಯಲ್ಲಿ ತ್ರಿಶೂಲ ಇನ್ನೊಂದು ಕೈಯಲ್ಲಿ ಅಭಯ ಹಸ್ತ ಹೊಂದಿದ್ದು, ಕಿರೀಟಧಾರಣೆಯಾಗಿದ್ದು ಕೈಗಳಿಗೆ ಬಳೆಗಳನ್ನು ಕಾಲಿಗೆ ಕಾಲ್ಡಡಗ ಕೊರಳಿಗೆ ಸರವನ್ನು ಕರ್ಣಕುಂಡಲಗಳನ್ನು ಹೊಂದಿದ್ದು, ಮೂರ್ತಿಯ ಮೇಲೆ ಚಂದ್ರ ಮತ್ತು ಕಮಂಡಲಗಳ ಚಿತ್ರವಿದೆ.

**ಶಂಭುಲಿಂಗ ಶಿಲ್ಪ:**

ಹೆಬ್ಬಳ್ಳಿಯ ಶಂಭುಲಿಂಗ ದೇವಾಲಯದ ಗರ್ಭಗೃಹದಲ್ಲಿವೆ. ಶಿಲ್ಪವು ನೆಲದಿಂದ ಸ್ವಲ್ಪ ಎತ್ತರದಲ್ಲಿದ್ದು, ಅದರ ಮೇಲೆ ಚೌಚಾಕಾರದಲ್ಲಿ ವಿಷ್ಣು ಭಾಗವು ಆವೃತ್ತಗೊಂಡಿದೆ. ಮೇಲೆ ರುದ್ರಭಾಗ ಚಂದ್ರಾಕಾರವಾಗಿದೆ. ಅದರ ಮೇಲ್ಮೈಯ ಮೇಲೆ ಎದುರುಗಡೆ ಎರಡು ಉದ್ದನೆಯ ರೇಖೆಯನ್ನು ಕೊರೆಯಲಾಗಿದೆ. ಈ ರುದ್ರಭಾಗವು ಅತಿ ನುಣುಪಾಗಿದ್ದು ಮತ್ತು ಹೊಳಪಿನಿಂದ ಕೂಡಿದೆ.

**ವಿಷ್ಣು ಶಿಲ್ಪ: (ಸತ್ಯನಾರಾಯಣ)**

ಹೆಬ್ಬಳ್ಳಿಯ ಮೂಗಬಸವೇಶ್ವರ ದೇವಾಲಯದ ಮಧ್ಯ ಕಮಾನಿನಲ್ಲಿದೆ. ಸತ್ಯನಾರಾಯಣ ಮೂರ್ತಿಯು ೯೬ ಸೆಂ.ಮೀ ಎತ್ತರವಾಗಿದೆ. ಇದು ೪ ಕೈಗಳನ್ನು ಹೊಂದಿದ್ದು ಮೇಲಿನ ಬಲಗೈಯಲ್ಲಿ ಶಂಖ, ಎಡಗೈಯಲ್ಲಿ ಚಕ್ರ, ಕೆಳಗಿನ ಬಲಗೈಯಲ್ಲಿ ಪದ್ಮ ಮತ್ತು ಎಡಗೈಯಲ್ಲಿ ಗಧೆ, ತಲೆಯ ಮೇಲೆ ಕೀರಿಟವಿದ್ದು ಕೊರಳಲ್ಲಿ ಹಾರ ಭುಜಬಂಧಿ ಯಜ್ಞೋಪವಿತವನ್ನು ಧರಿಸಿದ್ದು, ಕರ್ಣಕುಂಡಲ ಹೊಂದಿದ್ದು ಮೇಲೆ ನರಸಿಂಹ ತೋರಣ ಹೊಂದಿದೆ. ಎಡಕ್ಕೆ ಮತ್ತು ಬಲಕ್ಕೆ ಎರಡು ಚಿಕ್ಕ ಮೂರ್ತಿಗಳಿವೆ. ಇವನ್ನು ಮದ್ವಾಚಾರ್ಯರು ಸ್ಥಾಪಿಸಿದ ಪ್ರತಿಮೆ ಇದೆ.

**ಕನಕಾಂಬಿಕಾ ಶಿಲ್ಪ:**

ಕನಕಾಂಬಿಕಾ ದೇವಾಲಯದಲ್ಲಿ ಕನಕಾಂಬರಿ ದೇವತೆಯ ಅತಿ ಚಿಕ್ಕ ಮೂರ್ತಿಯಾಗಿದ್ದು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ದೀಪ ಮೇಲನ ಕೈ ಅಭಯಹಸ್ತ, ಇನ್ನೊಂದು ಕೈಯಲ್ಲಿ ತ್ರಿಶೂಲ ಹಿಡಿದುಕೊಂಡು ಕುಳಿತ ಚಕ್ರವಿದೆ. ಆಕೆಯ ಅಕ್ಕ-ಪಕ್ಕ ಕ್ಷೇತ್ರಪಾಲಿಕೆಯರು ಇರುತ್ತಾರೆ. ಅವರು ಸಹ ಕೈಯಲ್ಲಿ ಖಡ್ಗ ಮತ್ತು ತ್ರಿಶೂಲ ಮತ್ತು ಇನ್ನೊಂದು ಕೈಯಲ್ಲಿ ದೀಪ ಹಿಡಿದಿರುತ್ತಾರೆ. ಇವರನ್ನು ಊರ ರಕ್ಷಕರು ಎಂದು ಕರೆಯುವುದುಂಟು.

**ವೆಂಕಟೇಶ್ವರನ ಶಿಲ್ಪ:**

ಇದು ಗರ್ಭಗುಡಿಯಲ್ಲಿದೆ. ವೆಂಕಟೇಶ್ವರ ಮೂರ್ತಿಯ ಎತ್ತರ ೩೨ ಸೆಂ.ಮೀ ಇದು ಯಜ್ಞೋಪವಿತ ಕಂಠಿಹಾರ, ಕುತ್ತಿಗೆಗೆ ಸರ, ಹಣೆಗೆ ನಾಮ, ಕರ್ಣಕುಂಡಲ ಹೊಂದಿದೆ. ಸ್ವಲ್ಪ ಎತ್ತರದ ಪೀಠ ಮೇಲೆ ನಿಂತಿದ್ದು, ಅದರ ಸುತ್ತಲೂ ಪಂಚಲೋಹದ ಪ್ರಭಾವಳಿಯಿದೆ. ಈತನಿಗೆ ನಾಲ್ಕು ಕೈಗಳಿದ್ದು, ಮೇಲಿನ ಎಡಗೈಯಲ್ಲಿ ಶಂಖ, ಬಲಗೈಯಲ್ಲಿ ಚಕ್ರ, ಕೆಳಬಲಗೈ ಅಭಯಹಸ್ತ, ಕೆಳಎಡಗೈ ಟೊಂಕದ ಮೇಲೆ ಇವರ. ಶ್ರೀದೇವಿ ಭೂದೇವಿಯರು ಕಿರೀಟಧಾರಣೆಯನ್ನು ಮಾಡಿದ್ದು ಇವರಿಬ್ಬರ ಕೈಗಳಲ್ಲಿ ಕಮಲಗಳನ್ನು ಹಿಡಿದಿದ್ದಾರೆ. ವೆಂಕಟೇಶ್ವರನ ಕೆಳಗೆ ಪ್ರಾಣದೇವರು ಇದ್ದಾನೆ.

**ಮಡಿವಾಳನ ಮಾಚಿದೇವನ ವಿಗ್ರಹ:**

ಅಮ್ಮಿನಭಾವಿಯಲ್ಲಿ ಶಿವಶರಣ ಮಾಚಿದೇವನ ವಿಗ್ರಹವಿದ್ದು, ಈಗ ಅದು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿಡಲಾಗಿದೆ. ಮಾಚಿದೇವ ಇಲ್ಲಿ ಆನೆಯನ್ನು ಬಗ್ಗಿಸುತ್ತಿದ್ದಾನೆ. ಎಡಕ್ಕೆ ಇವನ ಪತ್ನಿ ತನ್ನ ಎಡಗೈಯನ್ನು ಮೇಲಕ್ಕೆತ್ತಿ ನಿಂತಿರುವಳು. ಈ ಭಾಗದಲ್ಲಿ ಶಿವಶರಣರ ಶಿಲ್ಪಗಳು ವಿರಳವಾಗಿದೆ. ಕಾಲ ಸುಮಾರು ೧೪ನೆಯ ಶತಮಾನ. ಉಳಿದಂತೆ ನಾಗಶಿಲ್ಪಗಳು, ದಕ್ಷ, ದಕ್ಷಿಣಾಮೂರ್ತಿ, ಕಾರ್ತಿಕೇಯಾ, ಕುದುರೆ ಮೇಲೆ ಕುಳಿತ ಪೇಠದಾರಿ ವ್ಯಕ್ತಿ, ಇನ್ನಿತರ ಪ್ರಾಚೀನ ಶಿಲ್ಪಾವಶೇಷಗಳು ಕಂಡುಬರುತ್ತವೆ.

**ನೇಮಿನಾಥ ಶಿಲ್ಪ:**

ನೇಮಿನಾಥ ಶಿಲ್ಪವು ನೇಮಿನಾಥ ಜಿನಾಲಯದ ಗರ್ಭಗೃಹದಲ್ಲಿದೆ. ಇದು ೯೫ ಸೆಂ.ಮೀ ಎತ್ತರ ಮತ್ತು ೬೧ ಸೆಂ.ಮೀ ಅಗಲವಾಗಿದೆ. ಪದ್ಮಾಸನದಲ್ಲಿರುವ ನೇಮಿನಾಥ ತೀರ್ಥಂಕರನು ಧ್ಯಾನ ಮುದ್ರೆಯಲ್ಲಿದ್ದಾನೆ. ಇದನ್ನು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಪೀಠದಲ್ಲಿ ಈತನ ಲಾಂಛನ ಶಂಖದ ನಿರೂಪಣೆಯಿದೆ.

**ಚೌವ್ವೀಸ್ ತೀರ್ಥಂಕರ ಶಿಲ್ಪ:**

ಚೌವ್ವೀಸ್ ತೀರ್ಥಂಕರ ಪ್ರಭಾವಳಿಯುಳ್ಳ ಆದಿನಾಥ ತೀರ್ಥಂಕರನ ಶಿಲ್ಪವು ೭೫ ಸೆಂ.ಮೀ ಎತ್ತರ ಮತ್ತು ೪೫ ಸೆಂ.ಮೀ ಅಗಲವಾಗಿದೆ. ಶಿಲ್ಪದ ಮಧ್ಯಭಾಗದಲ್ಲಿ ಖಡ್ಗಾಸನದಲ್ಲಿರುವ ಆದಿನಾಥ ತೀರ್ಥಂಕರನ ಜಟಾರಾಶಿಯು ಭುಜದ ಇಕ್ಕೆಲಗಳಲ್ಲಿ ಇಳಿಬಿದ್ದಿದೆ. ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದ್ದು, ಮೇಲ್ಭಾಗದಲ್ಲಿ ಮುಕ್ಕೊಡೆಯಿದೆ. ಕಾಲುಗಳ ಪಾರ್ಶ್ವಗಳಲ್ಲಿ ಗೋಮುಖ ಯಕ್ಷ ಮತ್ತು ಚಕ್ರೇಶ್ವರಿ ಯಕ್ಷಿ ತಮ್ಮ ಚತುರ್ಭುಜಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದುಕೊಂಡು ಸರ್ವಾಲಂಕೃತವಾಗಿ ಸೋಪಾನದಲ್ಲಿ ಆಸೀನರಾಗಿದ್ದಾರೆ. ಇದನ್ನು ಕಪ್ಪು ಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಅರೆಗಂಬಳಗ ಮೇಲಿನ ಪ್ರಭಾವಳಿ ಸುತ್ತ ಎರಡು ಸಾಲುಗಳಲ್ಲಿ ಚಿಕಣಿ ಆಕಾರದ ೨೧ ತೀರ್ಥಂಕರರಿದ್ದಾರೆ. ಈ ಶಿಲ್ಪದ ಕಾಲ ಸುಮಾರು ಕ್ರಿಶ. ೧೨ನೆಯ ಶತಮಾನ (ಕಲ್ಯಾಣ ಚಾಲುಕ್ಯ).[೩೪]

**ಪಾರ್ಶ್ವನಾಥ ಶಿಲ್ಪ:**

ಪಾರ್ಶ್ವನಾಥ ತೀರ್ಥಂಕರನ ಶಿಲ್ಪವು ಅಂತರಾಳದಲ್ಲಿದೆ. ಕ್ರಿಶ. ಸುಮಾರು ೧೨ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವು ೯೩ ಸೆಂ.ಮೀ ಎತ್ತರ ಮತ್ತು ೪೩ ಸೆಂ.ಮೀ ಅಗಲವಾಗಿದೆ. ಇದು ಕಪ್ಪು ಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈತನು ಸಂಪೂರ್ಣ ನಗ್ನವಾಗಿ ನಿರಾಭರಣನಾಗಿದ್ದಾನೆ. ತಲೆಯಲ್ಲಿ ಗುಂಗುರು ಕೂದಲುಗಳಿವೆ. ಭುಜ ಸ್ವಲ್ಪ ಅಗಲವಾಗಿದ್ದು, ತೋಳುಗಳು ದಪ್ಪವಾಗಿವೆ. ಈತನ ದೇಹದ ಹಿಂಭಾಗದಲ್ಲಿ ಏಳುಹೆಡೆ ಸರ್ಪ ತನ್ನ ಹೆಡೆಯನ್ನು ಬಿಚ್ಚಿ ಈತನಿಗೆ ರಕ್ಷಣೆ ನೀಡಿದೆ. ಸರ್ಪದ ಮೇಲ್ಭಾಗದಲ್ಲಿ ಅಲಂಕಾರಿಕ ಮುಕ್ಕೊಡೆಯಿದೆ. ತೀರ್ಥಂಕರನ ಕಾಲುಗಳ ಇಕ್ಕೆಲಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿಯರು ಸುಖಾಸನದಲ್ಲಿ ಕುಳಿತಿದ್ದಾರೆ. ಇವರು ಚತುರ್ಭುಜಧಾರಿಗಳಾಗಿದ್ದು ಕೈಯಲ್ಲಿ ಆಯುಧಗಳನ್ನಿಡಿದು ಅಲಂಕೃತರಾಗಿದ್ದಾರೆ. ಶಿಲ್ಪದ ಸುತ್ತಲೂ ಬಳ್ಳಿಯಿಂದ ರೂಪಿತವಾದ ಪ್ರಭಾವಳಿಯಿದೆ.

**ಪಾರ್ಶ್ವನಾಥ ತೀರ್ಥಂಕರನ ಶಿಲ್ಪ:**

ಜಿನಾಲಯದ ಆವರಣದಲ್ಲಿ ದೊರೆತ ಕ್ರಿಶ. ಸುಮಾರು ೧೨ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವನ್ನು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ವಸ್ತು ಸಂಗ್ರಹಾಲಯದಲ್ಲಿ ತಂದಿಡಲಾಗಿದೆ. ಇದು ೮೯ ಸೆಂ.ಮೀ. ಎತ್ತರ ೪೧ ಸೆಂ.ಮೀ ಅಗಲವಾಗಿದೆ. ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಖಡ್ಗಾಸನದಲ್ಲಿರುವ

ತೀರ್ಥಂಕರನ ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದ್ದು ಮೇಲ್ಭಾಗದಲ್ಲಿ ಏಳು ಹೆಡೆಗಳ ಸರ್ಪವಿದೆ. ಇದರ ಮೇಲ್ಭಾಗದಲ್ಲಿ ಮುಕ್ಕೆಡೆ ಇದೆ. ಕಾಲುಗಳ ಇಕ್ಕೆಲಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ತಮ್ಮ ಚತುರ್ಭುಜಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದುಕೊಂಡು ಸರ್ವಾಲಂಕೃತವಾಗಿ ಸುಖಾಸನದಲ್ಲಿ ಆಸೀನರಾಗಿದ್ದಾರೆ. ಈ ಶಿಲ್ಪದ ಮೇಲರ್ಧದ ಸುತ್ತಲೂ ಬಳ್ಳಿಯಿಂದ ರೂಪಿತವಾಗಿರುವ ಪ್ರಭಾವಳಿಯಿದೆ. [೩೫] ದೇಹಾಂಗದ ವಿನ್ಯಾಸದಿಂದ ಈ ಶಿಲ್ಪದ ಕಾಲ ಸುಮಾರು ಕ್ರಿ.ಶ. ೧೦ನೆಯ ಶತಮಾನದ ಕೊನೆಯ ಭಾಗ (ಕಲ್ಯಾಣ ಚಾಲುಕ್ಯ)ವೆಂದು ಹೇಳಬಹುದು.

**ಚಂದ್ರಪ್ರಭನಾಥ ತೀರ್ಥಂಕರ ಶಿಲ್ಪ:**

ಚಂದ್ರಪ್ರಭನಾಥನು ಸಿಂಹ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿದ್ದಾನೆ. ತಲೆಯಲ್ಲಿ ಗುಂಗುರು ಕೂದಲುಗಳಿವೆ. ಕಿವಿಗಳು ಉದ್ದವಾಗಿವೆ. ಕುತ್ತಿಗೆಯ ಸುತ್ತ ನಾಲ್ಕು ಗೆರೆಗಳನ್ನು ಕೊರೆಯಲಾಗಿದೆ. ತಲೆಯ ಹಿಂಭಾಗದಲ್ಲಿ ಪ್ರಭಾಮಂಡಲವಿದೆ, ಬೆನ್ನ ಹಿಂಭಾಗದಲ್ಲಿ ಆಸನವಿದೆ. ಆಸನವನ್ನು ವ್ಯಾಳಗಳು ಹೊತ್ತಿವೆ. ವ್ಯಾಳಗಳ ಬದಿಯಲ್ಲಿ ಇಬ್ಬರು ಶಿಷ್ಯರು ಕೈಮುಗಿದು ಕುಳಿತಿದ್ದಾರೆ. ಚಂದ್ರನಾಥನ ಹಿಂಭಾಗದಲ್ಲಿ ಅಂದರೆ ಭುಜಕ್ಕೆ ಸಮಾಂತರವಾಗಿ ಚಾಮರಧಾರರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಇವರು ಆಭರಣದಿಂದ ಅಲಂಕೃತರಾಗಿದ್ದಾರೆ. ನಿರಾಲಂಕೃತದ ಪ್ರಭಾಮಂಡಳದ ಮೇಲ್ಭಾಗದಲ್ಲಿ ಅಲಂಕಾರಿಕ ಮುಕ್ಕೊಡೆ ಇದೆ. ಮುಕ್ಕೊಡೆಯ ಸುತ್ತಲೂ ಹೂಬಳ್ಳಿಯ ಅಲಂಕರಣವಿದೆ. ಸಿಂಹಪೀಠವು ಹಿಂಬಣಿ ಮತ್ತು ಮುಂಬಣಿಯಾಗಿದ್ದು, ಪೀಠದಲ್ಲಿ ೫ ಸಿಂಹಗಳನ್ನು ತೋರಿಸಲಾಗಿದೆ.[೩೬] ಪೀಠದಲ್ಲಿರುವ ಶಾಸನವು ಮೂಲ ಸಂಘ ಸೇನಗಣದ ಪಾಲಿಸೆಟ್ಟಿಯು ಬಸದಿಗೆ ಚಂದ್ರಸ್ವಾಮಿ ಶಿಲ್ಪ ಮಾಡಿಸಿಕೊಟ್ಟ ಬಗ್ಗೆ ತಿಳಿಸುತ್ತದೆ.[೩೭]

**ಮಹಾವೀರ ಶಿಲ್ಪ:**

ಅಮ್ಮಿನಭಾವಿಯ ದುಂಡಾದ ಮಹಾವೀರನ ವಿಗ್ರಹವು ಈಗ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯಲ್ಲಿದೆ. ಈತನು ಪದ್ಮಾಸನದಲ್ಲಿ ಕುಳಿತಿದ್ದು, ಯೋಗಮುದ್ರೆಯಲ್ಲಿದ್ದಾನೆ. ತಲೆಯಲ್ಲಿ ಗುಂಗುರು ಕೂದಲುಗಳಿವೆ, ಭುಜಗಳ ಮೇಲೂ ಕೂದಲುಗಳು ಹರಡಿರುವುದು ವಿಶೇಷವೆನಿಸಿದೆ. ಇದರ ಕಾಲಮಾನ ಕ್ರಿ.ಶ. ೧೦ನೆಯ ಶತಮಾನದ ಕೊನೆಯ ಭಾಗ ಅಂದರೆ ಕಲ್ಯಾಣ ಚಾಲುಕ್ಯರ ಕಾಲವಾಗಿರಬಹುದು.[೩೮]

**ಬಾಹುಬಲಿ ಶಿಲ್ಪ:**

ಸುಮಾರು ೧೭ನೆಯ ಶತಮಾನದ ಬಾಹುಬಲಿ ಶಿಲ್ಪವು ಹೆಬ್ಬಳ್ಳಿಯ ಚಂದ್ರಪರಮೇಶ್ವರಿಯ ದೇವಾಲಯಕ್ಕೆ ಸಂಬಂಧಿಸಿದುದು. ಈಗ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗದಲ್ಲಿದೆ. ಕ್ರಿ.ಶ.ಸುಮಾರು ೧೭ನೆಯ ಶತಮಾನದ ಬಾಹುಬಲಿ ಶಿಲ್ಪವು ೪೧ ಸೆಂ.ಮೀ ಎತ್ತರ ಮತ್ತು ೨೩ ಸೆಂ.ಮೀ ಅಗಲವಾಗಿದೆ. ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಬಾಹುಬಲಿಯ ಕೈಕಾಲುಗಳಿಗೆ ಮಾದವಿ ಲತೆಗಳು ಸುತ್ತಿಕೊಂಡಿವೆ. ಈ ಶಿಲ್ಪವು ತುಂಬಾ ತ್ರುಟಿತವಾಗಿದೆ. ಕನ್ನಡ ನಾಡಿನಲ್ಲಿರುವ ಬಾಹುಬಲಿ ಶಿಲ್ಪ ಪರಂಪರೆಯ ಪಟ್ಟಿಗೆ ಧಾರವಾಡ ಜಿಲ್ಲೆಯಿಂದ ಇದೊಂದು ಅಪರೂಪದ ಕೊಡಗೆಯಾಗಿದೆ.[೩೯]

**ಕೂಷ್ಮಾಂಡಿನಿ ಶಿಲ್ಪ:**

ಕನಕೂರು ಪಾಂಡುರಂಗ ದೇವಾಲಯದ ಗರ್ಭಗೃಹ ದ್ವಾರಬಂಧದ ಎಡಬದಿಯ ಭಿತ್ತಿಗೂಡಿನಲ್ಲಿ ಕ್ರಿಶ. ೧೧ನೆಯ ಶತಮಾನದ ಕೂಷ್ಮಾಂಡಿನಿಯ ಶಿಲ್ಪವಿದೆ. ೧೦೭ ಸೆಂ.ಮೀ ಎತ್ತರ ಮತ್ತು ೬೯ ಸೆಂ.ಮೀ ಅಗಲವಾಗಿರುವ ಶಿಲ್ಪವು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಸಿಂಹದ ಮೇಲೆ ಸವ್ಯಲಲಿತಾಸನದಲ್ಲಿರುವ ಕೂಷ್ಮಾಂಡಿನಿ ಜಟಾಮುಕುಟ, ಮಣಿಸರ, ಕರ್ಣಕುಂಡಲ, ಕಂಠಹಾರ, ತೋಳಬಂದಿ, ಕೈಬಳೆ, ಬೆರಳುಂಗುರ, ಕಟಿವಸ್ತ್ರ, ಕಾಲ್ಗಡಗ, ಕಾಲುಂಗುರ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾಳೆ. ಬಲಗೈಯಲ್ಲಿ ಬೀಜಪೂರವಿದೆ. ಎಡಗೈಯಲ್ಲಿ ತೊಡೆಯ ಮೇಲೆ ಆಸೀನನಾಗಿರುವ ತನ್ನ ಪುತ್ರ ಪ್ರಿಯಂಕರನನ್ನು ಹಿಡಿದುಕೊಂಡಿದ್ದಾಳೆ. ಶಿಲ್ಪದ ಸುತ್ತಲೂ ಅಮ್ರವೃಕ್ಷದ ಎಲೆಗಳ ಅಲಂಕೃತ ಪ್ರಭಾವಳಿಯಿದೆ. ಮೇಲ್ಭಾಗದಲ್ಲಿ ಪರ್ಯಂಕಾಸನದಲ್ಲಿರುವ ತೀರ್ಥಂಕರನ ಬಿಂಬವಿದೆ. ಅಂಬಿಕೆ ಎಂತಲೂ ಪ್ರಸಿದ್ಧಳಾಗಿರುವ ಇವಳು ನೇಮಿನಾಥ ತೀರ್ಥಂಕರನ ಯಕ್ಷಿಯಾಗಿದ್ದಾಳೆ.[೪೦]

**ವರ್ಣಚಿತ್ರಗಳು:**

ಅಮ್ಮಿನಭಾವಿಯ ಶಾಂತೇಶ್ವರ ಮಠದಲ್ಲಿ (ಪಂಚಗೃಹ ಹಿರೇಮಠ) ಪ್ರಾಚೀನ ಕಾಲದ ವರ್ಣಚಿತ್ರಗಳಿವೆ. ಇವುಗಳ ನಿರೂಪಣೆ ಹಾಗೂ ಅವುಗಳ ವಿನ್ಯಾಸಗಳನ್ನು ಕುರಿತು ಸ್ಥೂಲವಾಗಿ ಈ ಕೆಳಗೆ ನೋಡಬಹುದು. ಶಾಂತೇಶ್ವರ ಮಠದ ಚಿತ್ರಗಳನ್ನು ಭಿತ್ತಿ ಚಿತ್ರಗಳೆಂದು ಕರೆಯಬಹುದು. ನರಗುಂದದ ಶ್ರೀ ಹಸಬಿಯವರ ಮನೆಯ ಹೊರಭಾಗದ ಸಜ್ಜಾದ ಮೇಲೆ ಶಿವರಾಮ ಕಾರಂತರ ಅಭಿಪ್ರಾಯ. ಆದರೆ ಇಲ್ಲಿನ ಹೆಚ್ಚಿನ ಚಿತ್ರಗಳು ಭಿತ್ತಿಯ ಮೇಲೆ ಕಂಡುಬರುವುದಿಲ್ಲ. ಬದಲಾಗಿ ಮರದ ಹಲಗೆಗಳ ಸಜ್ಜಾಗಳ ಕೆಳಭಾಗದಲ್ಲಿ

ರಚನೆಯಾಗಿದೆ. ಮೊಗಸಾಲೆಯ ಕೆಳಮಹಡಿಯ ಒಳಮಾಳಿಗೆ ಮತ್ತು ಹೊರಭಾಗದ ತಗಡಿನ ಸಜ್ಜಾದ ಕೆಳಭಾಗದಲ್ಲಿ ಕಂಡುಬರುತ್ತದೆ.[೪೧]

ಪ್ರಸ್ತುತ ಚಿತ್ರಗಳಲ್ಲಿ ಹಲವಾರು ಕಥಾನಿರೂಪಣಾ ವಿಷಯಗಳು ಬಿಂಬಿತವಾಗಿವೆ. ಧಾರ್ಮಿಕ, ಪೌರಾಣಿಕ ಹಾಗೂ ಸಾಮಾಜಿಕ ವಿಷಯಗಳೂ ನಿರೂಪಣೆಗೊಂಡಿವೆ. ಮಠದ ತೊಟ್ಟಿಭಾಗದಲ್ಲಿ ಅಂದರೆ ಮೊಗಸಾಲೆಯ ಹಿಂದಿನ ಗೋಡೆಯ ಮೇಲೆ ಭಿತ್ತಿ ಚಿತ್ರಗಳು ಕಂಡು ಬರುತ್ತವೆ. ಇಲ್ಲಿ ಅಷ್ಟ–ದಿಕ್ಪಾಲಕರ ಚಿತ್ರಗಳಿದ್ದು, ಎಲ್ಲ ಚಿತ್ರಗಳನ್ನು ಒಂದೇ ಸಾಲಿನಲ್ಲಿ ಪಟ್ಟಿಕೆಗಳ ಮಾದರಿಯಲ್ಲಿ ತೋರಿಸಲಾಗಿದೆ. ಹಳದಿ, ಕೆಂಪು ವರ್ಣಗಳೇ ಮುಖ್ಯವಾಗಿ ಕಂಡುಬರುವ ಈ ಚಿತ್ರಗಳು ರೇಖಾಪ್ರಧಾನವಾದವುಗಳೇ ಆಗಿವೆ. ಸಜ್ಜಾದ ಕೆಳಗೆ ರಚನೆಗೊಂಡಿರುವ ಚಿತ್ರಗಳಲ್ಲಿ ಮಹಾಭಾರತ, ಕೃಷ್ಣಲೀಲಾ, ಶಿವಲೀಲಾ ಚಿತ್ರಗಳಿವೆ.[೪೨] ಶಿವನ ಸಭೆಯನ್ನು ಬಿಂಬಿಸುವ ಚಿತ್ರ, ಈ ಚಿತ್ರದ ಎಡಬದಿಗೆ ಪಂಚಮುಖ ಶಿವನು ಸುಖಾಸನದಲ್ಲಿ ಕುಳಿತಿದ್ದು ತನ್ನ ಎಡತೊಡೆಯ ಮೇಲೆ ಪಾರ್ವತಿಯನ್ನು ಕೂಡಿಸಿಕೊಂಡಿದ್ದಾನೆ. ಶಿವನಿಗೆ ಇಲ್ಲಿ ಹತ್ತು ಕೈಗಳು, ಎಲ್ಲವೂ ಒಂದೊಂದು ಆಯುಧಗಳನ್ನು ಹಿಡಿದಿವೆ. ಜಟಾಮುಕುಟಧಾರಿಯಾದ ಶಿವನ ಕೆಳಗೆ ನಂದಿ, ಭೃಂಗಿ, ಜೊತೆಯಲ್ಲಿ ಶೈವ ಭಕ್ತರು ಇರುವುದು ಕಂಡುಬರುತ್ತದೆ. ಶಿವನನ್ನು ಬಿಳಿವರ್ಣದಿಂದ ತೋರಿಸಲಾಗಿದೆ. ಲಕ್ಷ್ಮೀನರಸಿಂಹನನ್ನು ಬಿಂಬಿಸುವ ಚಿತ್ರದಲ್ಲಿ ಪದ್ಮಾಸನಧಾರಿಯಾದ ನರಸಿಂಹನು ತನ್ನ ಎಡ ತೊಡೆಯಲ್ಲಿ ಲಕ್ಷ್ಮೀಯನ್ನು ಕೂಡಿಸಿಕೊಂಡಿದ್ದಾರೆ. ಅಗಲವಾದ ಮುಖ ದುಂಡನೆಯ ನೇರವಾದ ಆಕರ್ಷಕ ಕಣ್ಣುಗಳು, ತೆರೆದ ಬಾಯಿ, ಚತುರ್ಬಾಹುಗಳು, ನರಸಿಂಹನ ಆಕೃತಿಯನ್ನು ಸೊಗಸಾಗಿ ಕಾಣುವಂತೆ ಮಾಡಿವೆ.[೪೩] ಇವುಗಳ ಗುಂಪಿನಲ್ಲೇ ಬರುವ ಚಿತ್ರದಲ್ಲಿ ಶ್ವೇತಗಜದ ಮೇಲೆ ಅಂಬಾರಿಯಲ್ಲಿ ಕುಳಿತ ಸ್ತ್ರೀಯರು ಮತ್ತು ಅದರ ಮುಂದೆ ನಿಂತಿರುವ ಈರ್ವರು ಪುರುಷ ಆಕೃತಿಗಳನ್ನು ಹೊಂದಿರುವ ಚಿತ್ರಗಳು ಕಂಡುಬರುತ್ತದೆ. ಮತ್ತೊಂದು ಚಿತ್ರದಲ್ಲಿ ದೇವಿ, ವೇಣುಗೋಪಾಲ, ಸರಸ್ವತಿ ಮತ್ತು ಗಣಪತಿಯರ ಚಿತ್ರಗಳು ಕಂಡುಬರುತ್ತವೆ. ದೇವಿಯು ಕಮಲದ ಮೇಲೆ ದಶಹಸ್ತಳಾಗಿ ಕುಳಿತಿದ್ದಾಳೆ. ಚತುರ್ಬಾಹು ಹಸ್ತನಾದ ಕೃಷ್ಣನು ವೇಣುಗೋಪಾಲನಾಗಿದ್ದಾನೆ. ವೀಣಾಪಾಣಿ ಸರಸ್ವತಿ ನುಡಿಸುತ್ತಿರುವ ವೀಣೆಯ ಇಂಪಾದ ನಿನಾದವನ್ನು ಗಣೇಶನು ಆಸ್ವಾದಿಸುತ್ತಿರುವನು. ಇಲ್ಲಿ ಮನ್ಮಥ ವಿಜಯಕ್ಕೆ ಸಂಬಂಧಿಸಿದ ಚಿತ್ರಣವಿದೆ. ರತಿಮನ್ಮಥನ ಶಿಲ್ಪಗಳು ಹೊಯ್ಸಳ ದೇವಾಲಯದ ಭಿತ್ತಿಗಳಲ್ಲಿ ಬಾದಾಮಿ ಚಾಲುಕ್ಯರ ಕಾಲದಲ್ಲಿ ಕಂಡು ಬಂದ ಹಾಗೆ ಇಲ್ಲಿಯಾ ಇಂತಹುದೇ ಚಿತ್ರ ನಿರೂಪಣೆ ಇದೆ. ಚಿತ್ರದಲ್ಲಿ ಶ್ವೇತ ವರ್ಣಧಾರಿ ಶಿವನು ಚತುರ್ಭುಜದ ಹಸ್ತನಾಗಿ ಕುಳಿತಿದ್ದಾನೆ. ಇನ್ನೊಂದೆಡೆ ಕಬ್ಬಿನ ಬಿಲ್ಲನ್ನು ಹಿಡಿದು ಹೂಬಾಣವನ್ನು ಬಿಡಲು ಸನ್ನದ್ಧನಾದ ಕಾಮದೇವನನ್ನು ತೋರಿಸಿದೆ. ಶಿವನ ಬಲದಲ್ಲಿ ಭವಾನಿ (ದೇವಿ–ಗಿರಿಜಾ) ಆಕರ್ಷಕ

ಭಂಗಿಯಲ್ಲಿ ನಿಂತಿದ್ದಾಳೆ. ಅವಳು ನಿಂತ ಭಂಗಿ ನೃತ್ಯ ಭಂಗಿಯಂತಿದೆ. ಶಿವನು ಅವಳ ಕಡೆ ನೋಡದೇ ತನ್ನ ತಪದಲ್ಲಿ ಮಗ್ನನಾಗಿದ್ದಾನೆ. ಇಲ್ಲಿನ ಆಕೃತಿಗಲ ಆಂತರಿಕ ಸಂಬಂದಾರ್ಥಗಳನ್ನು ನೋಡಿದಾಗ ಮನ್ಮಥನ ಹೂಬಾಣ ಶಿವನಿಗೆ ನಾಟಿದಾಕ್ಷಣ ಅವನ ಮನದಲ್ಲಿ ಶೃಂಗಾರ ಭಾವನೆ ಉತ್ಪನ್ನವಾದಾಗ ಅವನ ಎದುರಿನಲ್ಲಿ ಅವನಿಗಾಗಿ ಕಾಯುತ್ತಿರುವ ದೇವಿಯನ್ನು ಕಲಾವಿದನು ಭವಾನಿಯಾಗಿ ಚಿತ್ರಸಿದ್ದಾನೆ. ಸಾಮಾನ್ಯವಾಗಿ ಮನ್ಮಥ ವಿಜಯದ ಚಿತ್ರಗಳು ಶಿಲ್ಪಗಳಲ್ಲಿ ರತಿಮನ್ಮಥ ಶಿಲ್ಪಗಲ ರೂಪಗಳಾಗಿ ಕಂಡು ಬರುತ್ತದೆ. ಮನ್ಮಥ ವಿಜಯದ ಚಿತ್ರದಂತೆ ದಕ್ಷಯಜ್ಞ ಚಿತ್ರಕೂಡ ಬಹುವಿಶಿಷ್ಟವಾಗಿ ದೃಶ್ಯನಿರೂಪಣೆ ಹೊಂದಿದೆ.[೪೪]

ಕುರುಕ್ಷೇತ್ರದ ಚಿತ್ರಣದಲ್ಲಿ ಹನುಮದ್ಧ್ವಜದ ಪಥದಲ್ಲಿ ಕೃಷ್ಣಸಾರತಿಯಾದ ಅರ್ಜುನನು ರಥದಲ್ಲಿ ಕುಳಿತು ಯುದ್ಧಮಾಡುತ್ತಿದ್ದಾನೆ. ಅವನಿಗೆ ಎದುರಾಗಿ ಧುರ್ಯೋಧನನು ರಥದಲ್ಲಿ ಕುಳಿತು ಯುದ್ಧ ಮಾಡುತ್ತಿದ್ದಾನೆ. ಇನ್ನೊಂದು ಚಿತ್ರದಲ್ಲಿ ಶಿವನು ತ್ರಿಪುರಾಸುರನನ್ನು ಸಂಹರಿಸಲು ರಥವನ್ನೇರಿ ಯುದ್ಧದಲ್ಲಿ ತೊಡಗಿದಂತೆ ತೋರಿಸಲಾಗಿದೆ. ತ್ರಿಪುರಾಂತಕ ಶಿವನ ಕಥಾನಿರೂಪಣಾ ಶಿಲ್ಪವು ಹೊಯ್ಸಳರ ಕಾಲದಲ್ಲಿನ ದೇವಾಲಯಗಳಲ್ಲಿ ಕಥಾನಕ ಪಟ್ಟಿಕೆಗಳ ಮೇಲೆ ರಚಿತವಾದ ಚಿತ್ರ ಮತ್ತು ಹಂಪಿ ವಿರುಪಾಕ್ಷ ದೇವಾಲಯದ ಮಹಾಮಂಟಪದ ಒಳಮಾಳಿಗೆಯ ಭಿತ್ತಿಯಲ್ಲಿ ಈ ರೀತಿಯ ಚಿತ್ರ ರಚನೆಯು ಕಂಡು ಬರುತ್ತವೆ. ಇಲ್ಲಿನ ಚಿತ್ರಗಳನ್ನು ಹೊರಮೊಗಸಾಲೆಯ ತಗಡಿನ ಸಜ್ಜಾದ ಕೆಳಗಡೆಯೂ ರಚಿಸಿದೆ. ಈ ಚಿತ್ರಗಳು ಬಹುತೇಕ ಮಾಸಿ ಹೋಗಿದ್ದು, ಅವಸಾನದ ಅಂಚಿನಲ್ಲಿವೆ. ಕಾಳಿಂಗಮರ್ದನ ಕೃಷ್ಣ, ಗೋಪಿಕಾ ವಸ್ತ್ರಾಪಹರಣ ಮಾಡುವುದು, ಗಂಗಾಧರಶಿವ, ಮಾರ್ಕಂಡೇಯ ವಿಜಯ, ಮಹಿಷಮರ್ದಿನಿ ಇತ್ಯಾದಿ ವಿಷಯಗಳ ಚಿತ್ರಗಳು ನಿರೂಪಣೆ ಆಗಿವೆ. ಅಮ್ಮಿನಭಾವಿಯ ಶಾಂತೇಶ್ವರ ಮಠದ ಚಿತ್ರಗಳು ಉತ್ತರ ಕರ್ನಾಟಕದ ಭಿತ್ತಿ ಚಿತ್ರ ಪರಂಪರೆಗೆ ಪೂರಕವಾಗಿಯೇ ಬೆಳೆದಿವೆ. ಶಾಂತೇಶ್ವರ ಮಠ ಮೂಲತಃ ವೀರಶೈವ ಮಠವಾದರೂ ಇಲ್ಲಿ ವೈಷ್ಣವ-ಶೈವ ಎರಡು ಪಂಥಗಳಿಂದ, ಶಿವನ, ವಿಷ್ಣುವಿನ ವಿಭಿನ್ನ ಪ್ರಚಲಿತ ಚಿತ್ರಗಳನ್ನು ರಚಿಸಿದ್ದಾರೆ. ಒಟ್ಟಾರೆಯಾಗಿ ಸಂದರ್ಭಕ್ಕೆ ಅನುರೂಪವಾಗಿ ಚಿತ್ರ-ವರ್ಣ ಸಂಯೋಜನೆ ಇರುತ್ತಿತ್ತು. ಈ ಹಿನ್ನಲೆಯಲ್ಲಿ ಮೈಸೂರು ಸಂಪ್ರದಾಯದ ಭಿತ್ತಿ ಚಿತ್ರಗಳನ್ನು ಕೂಡ ನೋಡಬಹುದು. ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಕ್ರಿ.ಶ. ೧೮೫೦ರ ನಂತರದ ಕಾಲಕ್ಕೆ ಸೇರಿರಬಹುದು.[೪೫]

**ಅಡಿಟಿಪ್ಪಣೆಗಳು :**

---

೧ ಧಾ.ಜಿ.ದೇ.ಕೋ., ೨೦೦೬, ಪುಟ ೧೯.
೨ ಅದೇ ಪುಟ.
೩ ಸೌ.ಇ.ಇ. XV, ೨೩೧, ಅಮ್ಮಿನಭಾವಿ, ಕ್ರಿ.ಶ. ೧೨೪೩
೪ ಸೌ.ಇ.ಇ. XI-ii, ೧೨೧, ಅಮ್ಮಿನಭಾವಿ, ಕ್ರಿ.ಶ. ೧೦೭೧–೭೨.
೫ ಸೌ.ಇ.ಇ. XI-೩೧, ಅಮ್ಮಿನಭಾವಿ, ಕ್ರಿ.ಶ. ೧೧೪೬
೬ ಅದೇ ಪುಟ.
೭ ಸೌ.ಇ.ಇ. XI, ೨೨೮, ಅಮ್ಮಿನಭಾವಿ, ಕ್ರಿ.ಶ. ೧೧೬೩.
೮ ಅದೇ ಪುಟ.
೯ ಧಾ.ಜಿ.ದೇ.ಕೋ., ೨೦೦೬, ಪುಟ ೬೪.
೧೦ ಧಾ.ಜಿ.ದೇ.ಕೋ., ೨೦೦೬, ಪುಟ ೧೯.
೧೧ ಧಾ.ಜಿ.ದೇ.ಕೋ., ೨೦೦೬, ಪುಟ ೮೨.
೧೨ ಇ.ಐ. XIII, ಪುಟ.೩೧೬, ನರೇಂದ್ರ, ಕ್ರಿ.ಶ. ೧೧೨೩, ೧೧೨೫, ೧೧೨೬.
೧೩ ಇ.ಐ. XIII, ಪುಟ .೨೯೮, ನರೇಂದ್ರ, ಕ್ರಿ.ಶ. ೧೧೨೫.
೧೪ ಧಾ.ಜಿ.ದೇ.ಕೋ., ೨೦೦೬, ಪುಟ ೬೪.
೧೫ ಧಾ.ಜಿ.ದೇ.ಕೋ., ೨೦೦೬, ಪುಟ ೭೭.
೧೬ ಸೌ.ಇ.ಇ. XI-ii, ೧೫೪, ಕನಕೂರು, ಕ್ರಿ.ಶ. ೧೧೦೪.
೧೭ ಧಾ.ಜಿ.ದೇ.ಕೋ., ೨೦೦೬, ಪುಟ ೧೧೪.
೧೮ ಧಾ.ಜಿ.ಸೂ., ೬೫, ಹೆಬ್ಬಳ್ಳಿ, ಕ್ರಿ.ಶ.೧೨೪೮.
೧೯ ಧಾ.ಜಿ.ಸೂ., ಹೆಬ್ಬಳ್ಳಿ, ಸು.ಶ.೧೬
೨೦ ಅದೇ ಪುಟ.
೨೧ ಸೌ.ಇ.ಇ. XI-ii, ೧೨೧, ಅಮ್ಮಿನಭಾವಿ, ಕ್ರಿ.ಶ. ೧೦೭೧–೧೦೭೨.
೨೨ ಸೌ.ಇ.ಇ. XV-ii, ೩೧, ಅಮ್ಮಿನಭಾವಿ, ಕ್ರಿ.ಶ. ೧೧೪೬.
೨೩ ಧಾ.ಜಿ.ಸೂ. ನಂ.೧೦, ಅಮ್ಮಿನಭಾವಿ, ಕ್ರಿ.ಶ. ೧೯೯೨.
೨೪ ಹಂಜೆ ಎ.ಎನ್., ಧಾರವಾಡ ಪರಿಸರದಲ್ಲಿ ಜೈನಧರ್ಮ, ೨೦೦೮, ಪುಟ ೪೭.
೨೫ ಹಂಜೆ ಎ.ಎನ್., ಧಾರವಾಡ ಪರಿಸರದಲ್ಲಿ ಜೈನಧರ್ಮ, ೨೦೦೮, ಪುಟ ೪೮.
೨೬ ಅದೇ ಪುಟ.
೨೭ ಅದೇ ಪುಟ.
೨೮ ಹಂಜೆ ಎ.ಎನ್., ಧಾರವಾಡ ಪರಿಸರದಲ್ಲಿ ಜೈನಧರ್ಮ, ೨೦೦೮, ಪುಟ ೫೭–೫೮.
೨೯ ಹಂಜೆ ಎ.ಎನ್., ಧಾರವಾಡ ಪರಿಸರದಲ್ಲಿ ಜೈನಧರ್ಮ, ೨೦೦೮, ಪುಟ ೪೪.
೩೦ ಅದೇ ಪುಟ.
೩೧ ಅದೇ ಪುಟ.
೩೨ ಹಂಜೆ ಎ.ಎನ್., ೨೦೦೮, ಧಾರವಾಡ ಪರಿಸರದಲ್ಲಿ ಜೈನಧರ್ಮ, ಪುಟ ೪೮.
೩೩ ಧಾ.ಜಿ.ಸೂ. ನಂ.೬೬, ಹೆಬ್ಬಳ್ಳಿ, ಸು.ಶ.೧೩
೩೪ ಹಂಜೆ ಎ.ಎನ್., ೨೦೦೮, ಧಾರವಾಡ ಪರಿಸರದಲ್ಲಿ ಜೈನಧರ್ಮ, ಪುಟ ೭೩–೭೪.
೩೫ ಅದೇ ಪುಟ.

೩೬ ಜಯಮ್ಮ ಬಿ., ಧಾರವಾಡ ಜಿಲ್ಲೆಯ ಪುರಾತತ್ವ, ೨೦೦೭, (ಪಿಎಚ್.ಡಿ. ಪ್ರಬಂಧ) ಪುಟ ೧೨೫.

೩೭ ಸೌ.ಇ.ಇ. XV-ii, ೩೧, ಅಮ್ಮಿನಭಾವಿ, ಕ್ರಿ.ಶ. ೧೧೪೬.

೩೮ ಷಡರಕ್ಷಯ್ಯ, ರು.ಮ., ಜಯಮ್ಮ ಬಿ., ಧಾರವಾಡ ಜಿಲ್ಲೆಯ ಐತಿಹಾಸಿಕ ಸ್ಮಾರಕಗಳು ಮತ್ತು ಶಿಲ್ಪಗಳು, ಪುಟ ೮೯.

೩೯ ಹಂಜೆ ಎ.ಎನ್., ೨೦೦೮, ಧಾರವಾಡ ಪರಿಸರದಲ್ಲಿ ಜೈನಧರ್ಮ, ಪುಟ ೮೦–೮೧.

೪೦ ಹಂಜೆ ಎ.ಎನ್., ೨೦೦೮,ಧಾರವಾಡ ಪರಿಸರದಲ್ಲಿ ಜೈನಧರ್ಮ, ಪುಟ ೮೬.

೪೧ ಕುಲಕರ್ಣಿ ಆರ್.ಎಚ್., ೨೦೦೮, ಅಮ್ಮಿನಭಾವಿಯ ಶಾಂತೇಶ್ವರ ಮಠದಲ್ಲಿರುವ ಭಿತ್ತಿಚಿತ್ರಗಳು, ಪುಟ ೧೮೨.

೪೨ ಅದೇ, ಪುಟ ೧೮೩.

೪೩ ಅದೇ, ಪುಟ ೧೮೪.

೪೪ ಅದೇ, ಪುಟ ೧೮೫.

೪೫ ಅದೇ, ಪುಟ ೧೮೬.

# ಅಧ್ಯಾಯ – ಐದು

# ನಂಬಿಕೆ ಮತ್ತು ಆಚರಣೆ

ಒಂದು ಸಮಾಜದ ವ್ಯಕ್ತಿಗಳು ಪರಂಪರಾಗತವಾಗಿ ನಡೆಸಿಕೊಂಡು ಬರುವ ನಿರ್ಧಿಷ್ಟವಾದ ನೀತಿ ನಡತೆಗಳಿಗೆ ಆ ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಬದ್ಧನಾಗಿ ನಡೆದುಕೊಳ್ಳಬೇಕು. ಈ ನಡವಳಿಕೆ ಹೆಚ್ಚು ಕಾಲ ರೂಢಿಗೆ ಬಂದಾಗ ಆಚಾರ ಎನಿಸಿಕೊಳ್ಳುತ್ತದೆ.[೧] ಸಮಾಜವು ವ್ಯವಸ್ಥಿತವಾಗಿ ನಡೆಯಲು ಜನಪದರು ಕೆಲವೊಂದು ಆಚಾರಗಳನ್ನು ರೂಢಿಗೆ ತಂದರು. ಅಂತಹ ಆಚಾರಗಳಲ್ಲಿ ನಂಬಿಕೆಗಳು ಗಣನೀಯವಾದ ಪಾತ್ರ ವಹಿಸುತ್ತವೆ. ನಂಬಿಕೆಗಳೇ ಸಂಪ್ರದಾಯಗಳಿಗೆ ಮೂಲ. ಮಾನವ ಸಂಸ್ಕೃತಿಯ ಅವಿಭಾಜ್ಯ ಅಂಗವಾದ ನಂಬಕೆಯು ಈತನ ಜೀವನ ವಿಧಾನ ವಿವಿಧ ನಡುವಳಿಕೆಗಳನ್ನು ಪ್ರತಿಬಿಂಬಿಸುತ್ತದೆ. ಇವುಗಳ ವ್ಯಾಪ್ತಿ ಗ್ರಾಮೀಣ ಜನರಿಗೆ ಮಾತ್ರ ಸೀಮಿತವಾಗಿದೆ. ಹೀಗಾಗಿ ನಂಬಿಕೆಗಳ ಹರವು ಮಾನವ ಸಂಸ್ಕೃತಿಯಲ್ಲಿ ಮಾತ್ರವಲ್ಲದೆ ಮಾನವನ ನಾಗರಿಕತೆಯಲ್ಲೂ ಕಂಡುಬರುತ್ತದೆ.

ಭಾರತೀಯರ ಜೀವನದಲ್ಲಿ ಧಾರ್ಮಿಕ ನಂಬಿಕೆಗಳು ಪ್ರಬಲವಾಗಿ ಕೆಲಸ ಮಾಡುತ್ತವೆ. ಇದು ಮಾನವನ ಸಾಮೂಹಿಕ ಬದುಕಿನ ಸಂದರ್ಭದಲ್ಲೇ ಹುಟ್ಟಿರಬೇಕು. ಇವುಗಳ ಹುಟ್ಟಿನ ಹಿಂದೆ ಜೀವನಾನುಭವವಿದೆ. ಪ್ರಕೃತಿಯಲ್ಲಿ ನಡೆಯಲು ಅನೇಕ ಘಟನೆಗಳ ಕುರಿತಾದ ಅಪೂರ್ವ ಕಲ್ಪನೆ ಅತಿಮಾನುಷ ಶಕ್ತಿಯ ಭಯ ಇತ್ಯಾದಿಗಳು ನಂಬಿಕೆಗಳ ಹುಟ್ಟಿಗೆ ಕಾರಣವಾಗಿರುವುದು.[೨] ಗ್ರಾಮೀಣ ಪ್ರದೇಶಗಳಲ್ಲಿ ದೇವರಿಗೆ ಹರಕೆಮಾಡಿಕೊಳ್ಳುವ (ಹೊರುವ) ಪದ್ಧತಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದ್ದುದು ಕಾಣಬರುತ್ತದೆ. ರೋಗ–

ರುಜಿನಗಳನ್ನು (ಕಾಯಿಲೆಗಳನ್ನು) ವಾಸಿ ಮಾಡುತ್ತಾನೆ ಎಂಬುದು ಅವರ ನಂಬಿಕೆ. ಇದರಿಂದ ಅವರು ಹಲವಾರು ರೀತಿಯ ಆಚರಣೆಗಳನ್ನು ಆಚರಿಸುತ್ತಾ ಬಂದಿದ್ದು ತಿಳಿದುಬರುತ್ತದೆ. ಹರಕೆ ಕಟ್ಟಿಕೊಂಡರೆ ದೇವರು ರಕ್ಷಿಸುತ್ತಾನೆ ಎಂಬ ನಂಬಿಕೆಯೇ ಅವರ ನೆಮ್ಮದಿಗೆ ಕಾರಣವಾಗಿ ರೋಗ ನಿವಾರಣೆಯಲ್ಲಿ ಮಹತ್ತರವಾದ ಪಾತ್ರವಹಿಸಿದ್ದು ಕಾಣಬರುತ್ತದೆ. ನಂಬಿಕೆಗಳು ಹಳ್ಳಿಗಳಲ್ಲಿ ಆಚಾರ ವಿಚಾರ ಮತ್ತು ಪದ್ಧತಿಗಳಲ್ಲಿ ಪ್ರಚಲಿತವಾಗಿದೆ. ಐತಿಹಾಸಿಕವಾಗಿ ಇವುಗಳನ್ನು ಗಮನಿಸಿದರೆ, ಬಹುತೇಕ ನಂಬಿಕೆಗಳು ಪ್ರಕೃತಿ ಮೂಲವಾಗಿ ಹುಟ್ಟಿಕೊಂಡವುಗಳೇ ಆಗಿವೆ. ಈ ನಂಬಿಕೆಗಳು ಮಾನವನ ಜೀವನವನ್ನು ನಿಯಂತ್ರಿಸುವ ಪ್ರಬಲಶಕ್ತಿಗಳಾಗಿ ಬೆಳೆದು ಉಳಿದುಕೊಂಡು ಬಂದಿದೆ.[೩]

ಸಂಸ್ಕೃತಿಯ ಪುನರುತ್ಥಾನವೇ ಹಬ್ಬ ಎಂದು ಕರೆಯುತ್ತೇವೆ. ಅದು ತನ್ನದೇ ಆದಂತಹ ನಂಬಿಕೆ ಮತ್ತು ಆಚರಣೆಗಳ ಮೇಲೆ ನಿಂತು ಸಂಪ್ರದಾಯಗಳನ್ನು ಪ್ರತಿಬಿಂಬಿಸುತ್ತದೆ. ಜನಪದ ಸಂಸ್ಕೃತಿಗೆ ಆಚರಣೆಯೇ ಬೆನ್ನೆಲುಬು ಆಚರಣೆ ಇಲ್ಲದೆ ಯಾವ ದೈವದ ಅಸ್ತಿತ್ವವೂ ಸಾಧ್ಯವಿಲ್ಲ. ಜನಪದ ಧರ್ಮ ಎಂಬುದು ಇಂದು ಆಚರಣೆಯ ಧರ್ಮವಾಗಿ ಮಾರ್ಪಾಡುಗೊಳ್ಳುತ್ತದೆ. ಇದರಿಂದ ದೇವತೆಗೂ ಸಮಾಜಕ್ಕೂ ಸಂಬಂಧದಲ್ಲಿ ಅಭಿನಯಗೊಳ್ಳುವ ಕ್ರಮದ ಆಚರಣೆಗಳನ್ನು ಹಾಗೂ ಅದರ ಸ್ವರೂಪವನ್ನು ತಿಳಿಸುವಲ್ಲಿ ಅದು ಸಹಾಯಕವಾಗಿದೆ. ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮತ್ತು ಯಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆ. ನಂಬಿಕೆ ಆಚರಣೆಯ ಬೆನ್ನೆಲುಬು ನಂಬಿಕೆಯ ಸಿದ್ಧಾಂತದ ಆಚರಣೆಯನ್ನು ಮುಂದುವರಿಸಿಕೊಂಡು ಹೋಗುವಂತೆ ಮಾಡುತ್ತದೆ.[೪] ಹಬ್ಬದ ಸಂದರ್ಭದಲ್ಲಿ ಆಚರಿಸುವ ಆಚರಣೆಗಳು ಆ ಗ್ರಾಮದ ಹಾಗೂ ಅಲ್ಲಿಯ ದೇವತೆಯ ಮಹತ್ವವನ್ನು ಪ್ರತಿಬಿಂಬಿಸುತ್ತದೆ. ಜನರು ಭಯ-ಭಕ್ತಿಯಿಂದ ಆಚರಣೆಗಳನ್ನು ಆಚರಿಸಿ ಪ್ರತಿಯೊಂದರಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದನ್ನು ಕಾಣುತ್ತೇವೆ. ಪ್ರಸ್ತುತವಾಗಿ ಗ್ರಾಮಗಳಲ್ಲಿ ಆಚರಣೆಗಳು ರೂಢಿಯಲ್ಲಿವೆ.

ಸಂಸ್ಕೃತಿಯ ಒಂದು ಭಾಗವಾದ ನಂಬಿಕೆ ಆಚರಣೆಯ ಸಂಸ್ಕೃತಿಯಲ್ಲಿ ಐತಿಹ್ಯ, ಜಾತ್ರೆ, ಉತ್ಸವ ಪುರಾಣ ಇತ್ಯಾದಿಗಳು ಸಮಾವೇಶಗೊಂಡಿರುತ್ತವೆ. ಒಂದು ಗ್ರಾಮ ಅಥವಾ ಸಮುದಾಯದ ಸಂಸ್ಕೃತಿಯನ್ನು ತಿಳಿದುಕೊಳ್ಳುವಲ್ಲಿ ಈ ಎಲ್ಲ ಕ್ಷೇತ್ರಗಳು ನಿರ್ಧರಿತ ಅಂಶಗಳಾಗಿವೆ. ಸಂಸ್ಕೃತಿ ಎಂಬುದು ನಿಂತ ನೀರಲ್ಲ ಅದು ಹರಿಯುವ ನೀರಾಗಿದೆ. ಗ್ರಾಮದಿಂದ ಗ್ರಾಮಕ್ಕೆ ಪ್ರದೇಶದಿಂದ ಪ್ರದೇಶದಕ್ಕೆ ಬದಲಾವಣೆಯಾಗಿ ಬೆಳೆಯುತ್ತಿರುವುದು

ವಿಶೇಷವಾಗಿದೆ. ಮನುಷ್ಯ ಅಕ್ಷರ ಬಲ್ಲವನಾಗುತ್ತಿದ್ದಂತೆಯೇ ಪರಂಪರಾಗತ ಕಲೆ, ನಂಬಿಕೆ, ಆಚರಣೆ, ಉತ್ಸವ ಮುಂತಾದ ಚಟುವಟಿಕೆಗಳು ದೂರಾಗುವ ಅಪಾಯದ ಸನ್ನಿವೇಶ ನಿರ್ಮಾಣವಾಗಿದೆ. ಈ ಹಿನ್ನೆಲೆಯಲ್ಲಿ ಸಾಧ್ಯವಾಗಿದೆ. ಅವುಗಳ ಕುರಿತ ಅಧ್ಯಯನಕ್ಕೆ ಹೆಚ್ಚು ಮಹತ್ವ ನೀಡುವುದು.

ಈ ಹಿನ್ನೆಲೆಯಲ್ಲಿ ಅಮ್ಮಿನಭಾವಿ ದೇಶಗತಿಯು ಪ್ರಸಿದ್ಧ ದೇಶಗತಿ ಮನೆತನಗಳಲ್ಲಿ ಒಂದಾಗಿದೆ. ದೇಶಗತಿ ಎಂದರೆ ಪರಗಣಾ ವತನ ಎನ್ನುತ್ತಿದ್ದಂತೆ ತಿಳಿದುಬರುತ್ತದೆ. ಪರಗಣಾ ಎಂದರೆ ಕೆಲವು ಹಳ್ಳಿಗಳ ಸಮೂಹ, ಈ ಒಂದು ಸಂಸ್ಥಾನದ ಆಡಳಿತವನ್ನು (ದೇಶಗತಿ) ದೇಶಪಾಂಡೆ ನಾಡಗೌಡ ಕುಲಕರ್ಣಿ ಹಾಗೂ ಇತರರ ಆಡಳಿತದ ಸಹಾಯದಿಂದ ನಡೆಸುತ್ತಿದ್ದರು. ದೇಶಗತಿಯು ಬಿಜಾಪುರದ ಆದಿಲ್‌ಷಾಯಿಯ ಕಾಲಕ್ಕೆ ಇವುಗಳು ಹುಟ್ಟಿರುವಂತೆ ಕಂಡುಬರುತ್ತವೆ. ಈ ದೇಶಾಯಿಗಳು ಅವರ ಅಧಿನದಲ್ಲಿರುತ್ತಿದ್ದರು. ಇದರ ಉಗಮದ ವೈಶಿಷ್ಟ್ಯವೆಂದರೆ, ಯಾವುದೇ ಕಾಲಕ್ಕೂ ಸಮಾಜದಲ್ಲಿ (ಗ್ರಾಮದಲ್ಲಿ) ವಿಘ್ನಗಳು ಬಾರದೆ ಸದಾ ಶಾಂತಿ ಹಾಗು ಸುರಕ್ಷಿತ ವಾತಾವರಣ ನೆಲೆಸುವ ಹಿನ್ನಲೆಯಲ್ಲಿ ಇವುಗಳು ಹುಟ್ಟಿಕೊಂಡವು.

ಅಮ್ಮಿನಭಾವಿ ದೇಶಗತಿಗೆ ಏಳು ಇನಾಮು ಗ್ರಾಮಗಳು ಇದ್ದಂತೆ ಕಂಡುಬರುತ್ತದೆ. ಅವುಗಳೆಂದರೆ ಅಮ್ಮಿನಭಾವಿ ಮರೇವಾಡ, ತಿಮ್ಮಾಪುರ, ಕರಡಿಗುಡ್ಡ, ಕವಲಗೇರಿ, ಚೆಂದನಮಟ್ಟಿ ಹಾಗೂ ಚೆಚರಕಿ ಎಂದರೆ ಊರಿಲ್ಲದೆ ಹಾಳಾದ ಗ್ರಾಮಗಳು ಎಂದರ್ಥ. ಈ ರೀತಿಯಾಗಿ ಅಮ್ಮಿನಭಾವಿ ದೇಶಗತಿಗೆ ಒಳಪಟ್ಟ ಗ್ರಾಮಗಳಲ್ಲಿ ವಿವಿಧ ರೀತಿಯ ಆಚರಣೆ, ನಂಬಿಕೆ, ಸಂಪ್ರದಾಯಗಳು ಇಂದಿಗೂ ಪರಂಪರಾಗತವಾಗಿ ಮುಂದುವರಿದುಕೊಂಡು ಬಂದಿದೆ.

**ಪುರಾಣ:**

ಪ್ರಕೃತಿಯ ರಹಸ್ಯವನ್ನು ಜೀವನಾಂತರಂಗವನ್ನು ವಿವರಿಸಲು ನಮ್ಮಲ್ಲಿ ಮೊದಲು ವೇದಗಳು ಹುಟ್ಟಿಕೊಂಡರೆ, ವೇದಾಂತರಂಗವನ್ನು ವಿವರಿಸಲು ಆಗಮಗಳು, ಉಪನಿಷತ್ತುಗಳು ಹುಟ್ಟಿಕೊಂಡವು. ಉಪನಿಷತ್ತುಗಳಿಂದ ಶಾಸ್ತ್ರಗಳನ್ನು ರಚಿಸಿದಂತೆ, ಜನಸಾಮಾನ್ಯರಿಗೆ ಶಾಸ್ತ್ರಗಳು ಸುಲಭವಾಗಿ ಅರ್ಥವಾಗಲು ಕಥಾರೂಪದಲ್ಲಿ ಹೇಳಲು ಪುರಾಣಗಳನ್ನು ಸೃಷ್ಟಿಸಲಾಯಿತು. ಪ್ರತಿ ದೇವರ ಹಿಂದೆ ಪೌರಾಣಿಕ ಹಿನ್ನಲೆ ಇರುವುದು. ಜನಸಾಮಾನ್ಯರ ಮನಸ್ಸನ್ನು ಒಲಿಸಿಕೊಳ್ಳಲು ಅಪೂರ್ವವಾದ ಕಥೆ ಸೃಷ್ಟಿಸಿದರು. ಇದನ್ನು

ನಾವು ದೇವಿ ಮಹಾತ್ಮೆ, ಶಿವಪುರಾಣಗಳಲ್ಲಿ ಕಾಣುತ್ತೇವೆ. ಭಯದ ಮೂಲಕ ಭಕ್ತಿ ಹುಟ್ಟಿಸುವುದು ಪುರಾಣದ ಗುರಿಯಾಗಿದೆ. ಹೀಗೆ ಹುಟ್ಟಿದ ಭಕ್ತಿ ನೆಲೆಯೂರುವಂತೆ ಮಾಡುವುದು ನೆಲೆಯೂರಿನ ಭಕ್ತಿ ಪೀಳಿಗೆ ಪೀಳಿಗೆಗೆ ಮುಂದುವರೆದುಕೊಂಡು ಹೋಗುವಂತೆ ಮಾಡುವುದೇ ಪುರಾಣಗಳ ಹುಟ್ಟಾಗಿದೆ.[೫]

ಐತಿಹಾಸಿಕ ಪುರಾಣವೆಂದರೆ ದಿನಾಂಕವಿರಲಾರದ್ದು ಹಿಂದಿನದ್ದು ಎನ್ನುವರು. ಆದರೆ ಇತಿಹಾಸ ಕಾಲದಲ್ಲೂ ಹಲವಾರು ಪುರಾಣ ಸಂಗತಿಗಳು ಕೂಡಿದ್ದು ವೀರಗಲ್ಲು, ಮಾಸ್ತಿಕಲ್ಲು ಮತ್ತು ಕೆಲವು ಶಿಲ್ಪಕಲಾ ಗುಡಿಗಳನ್ನು ನೋಡಿದಾಗ ಅನುಭವಕ್ಕೆ ಬರುವುದು ಇತಿಹಾಸದ ಮೂಲಸಂಗತಿಗಳು ಮರೆಯಾದಾಗ ಜನ ತಮಗೆ ತೋಚಿದಂತೆ ಆ ಸಂಗತಿಗಳ ಸುತ್ತ ಕಥೆಕಟ್ಟಿದ್ದ ಅವು ಬಾಯಿಂದ ಬಾಯಿಗೆ ಬಂದದ್ದೆ ಐತಿಹಾಸಿಕ ಪುರಾಣವೆನಿಸುವುದು. ಉದಾಃ ಅಮ್ಮಿನಭಾವಿ ದೇಶಾಯಿಯರು ಒಂದು ಭಾವಿಯನ್ನು ಕಟ್ಟಿ, ತಮ್ಮ ಕುಲದೇವತೆಯಾದ ಪದ್ಮಾವತಿ ಅಮ್ಮನವರ ಹೆಸರಿಟ್ಟು ಅಮ್ಮನವರ ಬಾವಿ ಎಂದಾಗಿ, ಮುಂದೆ ಅಮ್ಮಿನಭಾವಿ ಎಂದು ಪರಿವರ್ತನೆಗೊಂಡಿತು, ಇನ್ನೊಂದು ಐತಿಹ್ಯದ ಪ್ರಕಾರ ಊರ ಹೊರಗೆ ಇರುವ ೭ ಗರಾಣಿಬಾವಿ ಎಂದು ವಾಡಿಕೆಯಲ್ಲಿ ಕರೆಯುತ್ತಿದ್ದರಲ್ಲದೆ, ಬಾವಿಯ ಸುತ್ತಳತೆ ತುಂಬಾ ದೊಡ್ಡದಿದ್ದು, ಜನಗಳಿಗೆ ನೀರು ಒದಗಿಸುವ ಸಲುವಾಗಿ ಹಿಂದೆ 'ಅಮೀನ' ಎನ್ನುವವನು ಕಟ್ಟಿಸಿದನಂತಲೂ, ಆದ ಕಾರಣ ಇದಕ್ಕೆ ಅಮ್ಮಿನ ಭಾವಿ ಎಂದು ಹೆಸರು ಬಂದಿದೆ. ಈ ಕಥೆಯ ಬಗ್ಗೆ ಯಾವುದೇ ದಾಖಲೆಗಳಿಲ್ಲ.

ಆಧುನಿಕ ಪುರಾಣವು ಆಧುನಿನ ಜನರಿಗೆ ಅಂಟಿಕೊಂಡಿದೆ. ಇಲ್ಲದ್ದನ್ನು ಬೆಳೆಸಿ ಹೇಳಿ ಸಂತೋಷಪಡುವುದು ಮಾನವನ ಸ್ವಭಾವವಾಗಿದೆ. ಮೋಹನದಾಸ ಕರಮಚಂದ ಗಾಂಧಿಯವರು ಹುಟ್ಟು ಸಾವುಗಳಿಗೆ ದಾಖಲೆಗಳಿರುವಾಗ ಅವನೊಬ್ಬ ಅವತಾರ ಪುರುಷ ದೈವಿಶಕ್ತಿ ಎಂದು ಈಗಾಗಲೇ ಚಿತ್ರಿಸುತ್ತ ಹೊರಟಿರುವುದು ಆಧುನಿಕ ಪುರಾಣವನ್ನು ಸೂಚಿಸುವುದು.

ಪುರಾಣದ ಪ್ರಭಾವ ನಮ್ಮ ಜೀನವದ ಮೇಲೆ ಆಗುತ್ತಿರುವುದನ್ನು ಗಮನಿಸಿದಾಗ ಆಶ್ಚರ್ಯವೆನಿಸುವುದು. ಈ ಹಿನ್ನಲೆಯಲ್ಲಿ ಧಾರವಾಡ ಜಿಲ್ಲೆಯು ಕೂಡಾ ಪೌರಾಣಿಕ ಇತಿಹಾಸದಲ್ಲಿ ಮಹತ್ವದ ಪಾತ್ರ ವಹಿಸಿದೆ. ರಾಮಾಯಣ, ಮಹಾಭಾರತದ ಹಲವಾರು ಘಟನೆಗಳು ಈ ಪರಿಸರದಲ್ಲಿ ಬೆಸೆದಿದೆ. ಈಲ್ಲೆಯ ಗಡಿಯಾಚೆಯ ಸವದತ್ತಿಯ ಮುನಿಯ ಆಶ್ರಮ ಸ್ಥಾನವೆನಿಸಿದೆ. ಇದನ್ನು ಗಮನಿಸಿದರೆ ಅನೇಕ ಪೌರಾಣಿಕ ಕಥೆಗಳು ಈ ಪರಿಸರದಲ್ಲಿ ಅಡಕವಾಗಿದೆ.

ಋತುಗಳು ಬದಲಾದಂತೆ ಧಾರ್ಮಿಕ ಉತ್ಸವಗಳನ್ನು ಆಚರಿಸುವುದು ಭಾರತದಲ್ಲಿ ಬೆಳೆದುಬಂದ ಸಂಪ್ರದಾಯ. ಅದಕ್ಕೆ ಈ ಪರಿಸರ ಹೊರತಾಗಿಲ್ಲ, ಅಮ್ಮಿನಭಾವಿ ಪ್ರದೇಶದ ಪಂಚಗೃಹ ಹಿರೇಮಠದಲ್ಲಿ ೫ ಶಾಖಾ ಮಠಗಳಿವೆ. ಜಂಗಮರನ್ನು ಇಟ್ಟು ಲಗ್ನ, ಮುಂಜಿ, ಲಿಂಗಧಾರಣೆ ಇತ್ಯಾದಿ ಆಚರಣೆಗಳನ್ನು ಇಂದಿಗೂ ಆಚರಿಸುತ್ತಿದ್ದಾರೆ. ಶ್ರಾವಣ ಮಾಸದಲ್ಲಿ ಪುರಾಣ ಓದುತ್ತಾರೆ.

ಈ ಮಠದ ಶಾಖಾಮಠವಾದ ಮಾರಡಗಿಯಲ್ಲಿ ಗುರುಗಳಿಂದ ಪುರಾಣ ಪ್ರವಚನ ನಡೆಯುತ್ತದೆ. ಯಾವುದೇ ಕಾರ್ಯ ಕೈಗೊಳ್ಳುವ ಪೂರ್ವದಲ್ಲಿ ಊರಿನ ಜನರು ಮೊದಲು ಚರಂತಿಮಠಕ್ಕೆ ಬಂದು ಹೋಗುವ ವಾಡಿಕೆ ಇಂದಿಗೂ ಕಾಣಬಹುದಾಗಿದೆ. ಹಬ್ಬದ ಸಂದರ್ಭದಲ್ಲಿ ಆಚರಿಸುವ ಆಚರಣೆಗಳು ಪ್ರತಿಗ್ರಾಮದೇವತೆಯ ಮಹತ್ವವನ್ನು ಪ್ರತಿಬಿಂಬಿಸುತ್ತದೆ.

**ಐತಿಹ್ಯ:**

ಉತ್ತರ ಕರ್ನಾಟಕದ ಬಹುಪಾಲು ದೇಶಗತಿಗಳಲ್ಲೆ ವಿವಿಧ ರೀತಿಯ ಸಾಂಸ್ಕೃತಿಕ ಪರಂಪರೆಗಳನ್ನು ಅದರಲ್ಲಿಯೂ ವಿಶೇಷವಾಗಿ ಧಾರ್ಮಿಕ ಹಿನ್ನಲೆಯಲ್ಲಿ ಕೆಲ ಅಂಶಗಳನ್ನು ಗಮನಿಸಬಹುದಾಗಿದೆ. ಗ್ರಾಮದೇವತೆ ಜಾತ್ರೆ ಉತ್ಸವಾದಿಗಳನ್ನು ಅವುಗಳು ಸಾಗಿಬಂದ ರೀತಿಯನ್ನು ಗಮನಿಸಿದರೆ, ಅವುಗಳಿಗೆ ಹಿನ್ನಲೆಯ ಕಾರಣಗಳಿದ್ದಂತೆ ಕಂಡು ಬರುತ್ತದೆ.

ಅಮ್ಮಿನಭಾವಿಯ ಪರಿಸರದಲ್ಲಿ ಗ್ರಾಮದೇವತೆಗಳಾದ ದುರ್ಗವ್ವ, ದ್ಯಾಮವ್ವನ ಕುರಿತು ಐತಿಹ್ಯವಿದೆ. ಅಮ್ಮಿನಭಾವಿಯ ದ್ಯಾಮವ್ವನ ಜಾತ್ರೆಗಾಗಲಿ ಇತರ ಯಾವ ದೇಶಗತಿಗಳಲ್ಲಿ ನಡೆಯುವ ಈ ದೇವಿ ಆರಾಧನೆಯ ಪೂಜೆಗೆ ವಿಶೇಷವಾದ ತಳಹದಿಯಿದ್ದಂತೆ (ಪೂಜೆ) ಕಂಡುಬರುತ್ತದೆ. ಆದರೆ ಕೆಲವು ದೇಶಗತಿಗಳಲ್ಲಿ ಅವುಗಳ ಬಗೆಗೆ ಉಲ್ಲೇಖವಿಲ್ಲ. ಮತ್ತೆ ಕೆಲವು ಅಜ್ಞಾತವಾಗಿ ಉಳಿದಿದ್ದು, ಆಗಾಗ ಬೆಳಕಿಗೆ ಬರುತ್ತವೆ. ಅವುಗಳಲ್ಲಿ ವೀರ, ತ್ಯಾಗ ಮಹಿಳಾಮಣಿಗಳ ಆತ್ಮಾಹುತಿಗಳಿಗೆ ನಿದರ್ಶನವಾಗಿ ಕಂಡುಬರುವ ಪ್ರಸಂಗವೆಂದರೆ ತಾಳಿಕೋಟೆಯ ಕರಾಳ ಐತಿಹ್ಯದ ಘಟನೆಯಾಗಿದೆ.[೬]

ತಾಳಿಕೋಟೆಯು ಒಂದು ಕಾಲಕ್ಕೆ ವಿಜಯನಗರ ಸಾಮ್ರಾಜ್ಯದ ಪಾಳೆಗಾರಿಕೆಯಲ್ಲಿ ಐತಿಹಾಸಿಕ ಪ್ರಸಿದ್ಧಿಯನ್ನು ಪಡೆದ ಪ್ರದೇಶ ಪಾಳೆಗಾರಿಕೆ ಮನೆತನವಾಗಿದ್ದಂತೆ ಕಂಡುಬರುತ್ತದೆ. ಉತ್ತರ ಕರ್ನಾಟಕದ ದೇಶಗತಿ ಆಡಳಿತದ ಕಾಲಕ್ಕೆ ವಿಚಿತ್ರ ಸಂಪ್ರದಾಯ ಹಾಗೂ ಧ್ಯೇಯ ಧೋರಣೆಗಳನ್ನು ಅಳವಡಿಸಿಕೊಂಡು ಬಂದಿದೆ. ಮೂಢನಂಬಿಕೆಯ

ಕರಾಳ ರೂಢಿಯಲ್ಲಿ ಜೀವಿಗಳನ್ನು ಬಲಿಯ ರೂಪದಲ್ಲಿ ಹಿಂಸೆಯನ್ನು ನೀಡಿ, ಅದರ ಮೂಲಕ ಭವ್ಯ ಸಮಾಧಿ ಹಾಗೂ ಕೋಟೆಗಳನ್ನು ನಿರ್ಮಿಸಿದ್ದಾರೆ ಎಂಬುದಕ್ಕೆ ತಾಳಿಕೋಟೆಯ ದ್ಯಾಮವ್ವನ ಜಾತ್ರೆ ಅತ್ಯಂತ ಮಹತ್ವದ್ದಾಗಿದೆ.

ಐತಿಹ್ಯದ ಪ್ರಕಾರವಾಗಿ ಬಹು ಹಿಂದೆ, ದ್ಯಾಮವ್ವ ಎಂಬ ಪತಿವ್ರತಾ ಸ್ತ್ರೀ ಅಲ್ಲಿ ವಾಸಿಸುತ್ತಿದ್ದ ಕಾಲಕ್ಕೆ ಅಲ್ಲಿಯ ಅಧಿಪತ್ಯವನ್ನು ಮರಾಠಿ ಬಾಲಜಿ ಬಾಜಿರಾವರ ಪೇಶ್ವೆ ಕೈಯಲ್ಲಿ ಆಡಳಿತವಿದ್ದು, ಆಗ ಅಲ್ಲಿನ ಕೋಟೆಗೋಡೆಯ ನಿರ್ಮಾಣಕಾರ್ಯ ನಡೆಯುತ್ತಿದ್ದಂತೆ ತಿಳಿದುಬರುತ್ತದೆ. ಎಲ್ಲ ಕೆಲಸ ಪೂರ್ಣವಾದರೂ ರಾಜವಾಡೆಯ ಅಗಸೆಯ ಬಾಗಿಲು ಪದೇ ಪದೇ ಬೀಳುತ್ತಿದ್ದರಿಂದ ಹಿರಿಯರ ವಿಚಾರ ವಿನಿಮಯದಿಂದ ನಂತರ ನರಬಲಿಕೊಡುವ ಪ್ರಸಂಗ ಅತ್ಯಂತ ಶೋಚನೀಯವಾಗಿದೆ. ಜೀವಂತವಾದ ದೇಹಗಳನ್ನು ಕೋಟೆ ಗೋಡೆಯಲ್ಲಿ ಹಾಕಿದಾಗ ಮಾತ್ರ ಅದು ಬೀಳುವುದಿಲ್ಲ ಎಂಬುದು ಹಿರಿಯರ ವಿಚಾರವಾಗಿದೆ. ಈ ಹಿನ್ನೆಲೆಯಲ್ಲಿ ದ್ಯಾಮವ್ವನ್ನು ನೋಡಿಕೊಂಡು ಹೋಗಲು ಬಂದಿದ್ದ ಈಕೆಯ ತಮ್ಮನನ್ನು ಬಲಿಕೊಡುವ ನಿರ್ಧಾರ ಅಕ್ಕನಿಗೆ ತಿಳಿದು, ಪರಿಪರಿಯಾಗಿ ಬೇಡಿದರೂ ವ್ಯರ್ಥವಾಗಿ ಕೊನೆಗೆ ತಾನೂ ತನ್ನ ತಮ್ಮನ ಜೊತೆ ಬಲಿ ಹೋಗುತ್ತೇನೆಂದು ಮುತ್ತೈದೆ ದ್ಯಾಮವ್ವ ನಿರ್ಧರಿಸಿದ ರೀತಿಯಂತೆಯೇ, ಆಳವಾದ ಕೋಟೆಯ ಕಂದಕದಲ್ಲಿ ತಮ್ಮನನ್ನು ಮೊದಲಿಗೆ ಹಾಕಿ ಮೇಲೆ ಅವಳ ಅಕ್ಕ ದ್ಯಾಮವ್ವನನ್ನು ಕೂರಿಸಿ ಕೋಟೆಯ ಅಗಸಿ ಬಾಗಿಲನ್ನು ಪೂರ್ಣಗೊಳಿಸಿದರೆಂದು ಐತಿಹ್ಯವಿದೆ.

ಆದರೆ ಅವರೀರ್ವರು ಅಲ್ಲಿ ಜೀವಂತ ಆತ್ಮಗಳಾಗಿ (ದೆವ್ವ) ಬೇರೆಯವರಿಗೆ ತೊಂದರೆ ಕೊಡಬಾರದೆಂಬ ಭೀತಿಯ ಹಿನ್ನೆಲೆಯಲ್ಲಿ ಪೂಜಿಸುತ್ತ ಕ್ರಮೇಣವಾಗಿ ಅಲ್ಲಿ ದೊಡ್ಡ ಪೂಜೆ ಸಾಗುತ್ತ ಕಾಲದಿಂದ ಕಾಲಕ್ಕೆ ಊರ ಪ್ರಮುಖ ಗ್ರಾಮದೇವತೆ ಆದಳು. ಯಾವುದೇ ಶುಭ ಸಮಾರಂಭ ಹಾಗೂ ವಿಘ್ನ ನಿವಾರಣೆಗಳಿಗೆ ದೇವಿಯ ಆರಾಧನೆ ನಿರಂತರವಾಗಿ ಸಾಗುತ್ತ ಬಂದವು. ಕ್ರಮೇಣ ಮೂರು ವರ್ಷಗಳಿಗೊಮ್ಮೆ ಅತ್ಯಂತ ದೊಡ್ಡ ಪ್ರಮಾಣದಲ್ಲಿ ಜಾತ್ರೆ ಈಗಲೂ ನಡೆಯುತ್ತದೆ. ಅಂದರೆ ದೇವತೆಗಳ ಆರಾಧನೆಯ ಹಿನ್ನೆಲೆಯಲ್ಲಿ ಜೀವಂತ ಬಲಿದಾನಗಳ ವಿವರ ಹಾಗೂ ಮೂಢ ನಂಬಿಕೆಗಳ ತಳಹದಿಯ ಮೇಲೆ ಹಲವಾರು ಜೀವಿಗಳು ಮತ್ತೊಬ್ಬರ ಶಾಂತಿ ಸಮಧಾನಗಳ ಸಲುವಾಗಿಯೇ ತಮ್ಮ ಪ್ರಾಣವನ್ನು ಅರ್ಪಿಸಿಕೊಂಡ ವಿಶೇಷ ಹಾಗೂ ದೈವಿ ಪ್ರನಾಳಿಕೆಯ ಸಂಪ್ರದಾಯಗಳನ್ನು ಹಲವಾರು ಉತ್ತರ ಕರ್ನಾಟಕದ ದೇಶಗತಿಗಳಲ್ಲಿ ಗಮನಿಸಬಹುದಾಗಿದೆ.

ಈ ಹಿನ್ನೆಲೆಯಲ್ಲಿ ಧಾರವಾಡ ಜಿಲ್ಲೆಯ ದೇಶಗತಿಗೆ ಒಳಪಡುವ ಪ್ರದೇಶವೆಂದರೆ ಅಮ್ಮಿನಭಾವಿ ದೇಶಗತಿಯಾಗಿದೆ. ಇದು ಮರೆವಾಡ, ತಿಮ್ಮಾಪುರ, ಕರಡಿಗುಡ್ಡ ಕವಲಗೇರಿ, ಚಂದನಮಟ್ಟಿ ಆಗಿದೆ. ನರೇಂದ್ರ, ಹೆಬ್ಬಳ್ಳಿ, ತಲವಾಯಿ, ಮರೆವಾಡ ಗ್ರಾಮಗಳನ್ನು ಒಳಗೊಂಡಿದೆ ಇವುಗಳ ಒಂದು ಐತಿಹ್ಯದ ಪ್ರಕಾರ ಇಂದಿಗೂ ದುರ್ಗವ್ವ-ದ್ಯಾಮವ್ವ ಎನ್ನುವ ಗ್ರಾಮದೇವತೆಗಳ ಪೂಜೆ ನಡೆಯುವುದನ್ನು ಗಮನಿಸಬಹುದಾಗಿದೆ.

ಈ ಪರಿಸರದಲ್ಲಿ ಬರುವ ನರೇಂದ್ರ ಗ್ರಾಮದಲ್ಲಿ ಮಳೆಮಲ್ಲಯ್ಯನ ಮಠ ಪ್ರಸಿದ್ಧವಾಗಿದೆ. ಈ ಮಠದಲ್ಲಿದ್ದ ಹಠಯೋಗಿ ಶ್ರೀ ಮಹಾಂತ ಶಿವಯೋಗಿಗಳು ಪವಾಡ ಪುರುಷರಾಗಿ ಭಕ್ತರ ದುಃಖ-ದುಮ್ಮಾನ ದೂರಮಾಡಿ ಸರ್ವರ ಅಭಿಮಾನ ಹಾಗೂ ಆಧರಕ್ಕೆ ಕಾರಣರಾಗಿದ್ದಾರೆ. ಐತಿಹ್ಯದ ಪ್ರಕಾರ ಒಂದು ದಿನ ಅಖಂಡ ಭಜನೆ ನಡೆದ ಕಾಲಕ್ಕೆ ಶಿವಯೋಗಿಗಳು ದೇವಿಯ ಆರಾಧನೆಯಲ್ಲಿ ತೊಡಗಿದ್ದರು. ಇದ್ದಕ್ಕಿದ್ದಂತೆ ಒಂದು ದೊಡ್ಡ ನಾಗರ ಹಾವೊಂದು ಭಜನೆ ಮಾಡುತ್ತಿದ್ದ ಗುಂಪಿನಲ್ಲಿ ಪ್ರವೇಶಿಸಿತು. ಜನರು ಕಂಗಾಲಾಗಿ ಕೋಲಾಹಲವೆಬ್ಬಿಸಿದರು, ಆಗ ಶಿವಯೋಗಿಗಳು ಭಕ್ತರಿಗೆ ಶಿವಾಯ ನಮಃ ಓಂ ಮಂತ್ರ ನಿಲ್ಲಸಬೇಡಿರಿ ಎಂದು ಹೇಳುತ್ತ ಹಾವಿನತ್ತ ಹೋಗಿ ಹಾಲಿನ ಬಟ್ಟಲನ್ನು ಅದರ ಮುಂದೆ ಇಟ್ಟರು. ಸರ್ಪ ಹಾಲು ಕುಡಿದ ನಂತರ ಮಹಾಂತರು ಅದನ್ನು ಹಿಡಿದುಕೊಂಡು ಹೋಗಿ ಮಠದ ಹೊರಗೆ ಬಿಟ್ಟು ಬಂದರು.

ಮತ್ತೊಂದು ದಿನ ಭಜನೆ ನಡೆಯುತ್ತಿದ್ದಾಗ ರಾತ್ರಿ ಕೋಣವೊಂದು ಮಠದೊಳಗೆ ಪ್ರವೇಶಿಸಿ ಕೋಲಾಹಲವೆಬ್ಬಿಸಿತು. ಇದರಿಂದ ಭಕ್ತರು ಹೆದರಿ ಚೆಲ್ಲಾಪಿಲ್ಲಿಯಾದರು, ಶಿವಯೋಗಿಗಳು ಜನರಿಗೆ ಧೈರ್ಯ ಹೇಳುತ್ತ ವಿಭೂತಿಯನ್ನು ಮಂತ್ರಿಸಿ ಕೋಣನ ಮೈಮೇಲೆ ಎಸೆದರು. ಕೋಣ ಸುಮ್ಮನೆ ನಿಂತು ಬಿಟ್ಟಿತು. ಶಿವಯೋಗಿಗಳು ಅದಕ್ಕೆ ತಿನ್ನಲು ಆಹಾರವನ್ನು ತಂದಿಟ್ಟರು. ಆಹಾರ ತಿಂದ ಕೋಣವು ಹೊರಟುಹೋಗಿ ನಾಪತ್ತೆಯಾದುದನ್ನು ಕಂಡು ಭಕ್ತರೆಲ್ಲರೂ ನಿಬ್ಬೆರಗಾಗಿ ಮಹಾಂತರ ಮಹಿಮೆಯನ್ನು ಕೊಂಡಾಡಿದರು.

ಇನ್ನೊಂದು ಐತಿಹ್ಯದ ಪ್ರಕಾರ ನರೇಂದ್ರದಲ್ಲಿ ಭಜನೆ ಸಪ್ತಾಹ ಅತೀ ವೈಭವದಿಂದ ಸಾಗಿತ್ತು. ಒಂದು ದಿನ ಸಂಜೆ ಮಕ್ಕಳು ಆಟವಾಡುತ್ತಿದ್ದಾಗ, ಚಕ್ಕಡಿಗೆ ಹೂಡಿದ ಎತ್ತುಗಳು ಬೆದರಿದ ಕಾರಣ, ಜನದಟ್ಟಣೆಯಿಂದ ಚಕ್ಕಡಿ ಹುಡುಗನ ಮೇಲೆ ಹಾಯ್ದು ಹೋಯಿತು. ಅ ಮಗು ಸತ್ತು ಹೋಯಿತು ಜನ ಕಂಗಾಲಾದರು. ಮಗುವನ್ನು ತಂದು ಶ್ರೀಗಳವರ ಮುಂದೆ

ಇಟ್ಟು ರೋಧಿಸತೊಡಗಿದರು. ಶ್ರೀಮಹಾಂತ ಶಿವಯೋಗಿಗಳು ಜನರನ್ನು ಸಮಾಧಾನ ಪಡಿಸುತ್ತ ಓಂಕಾರವನ್ನು ಜಪಿಸುತ್ತ ಮಗುವಿನ ಮೇಲೆ ಪ್ರಸಾದವನ್ನು ಸಿಂಪಡಿಸಿದರು. ಮಗು ನಿದ್ರೆಯಿಂದ ಎದ್ದಂತೆ ಎದ್ದು ಕುಳಿತಿತ್ತು. ಇದನ್ನು ಕಂಡ ಜನರು ವಿಸ್ಮಯಗೊಂಡು ಸ್ವಾಮಿಯವರ ಪವಾಡ ಶಕ್ತಿಯ ಮಹಿಮೆಯನ್ನು ಕೊಂಡಾಡ ತೊಡಗಿದರು.

ಇದಲ್ಲದೆ ಶಿವಯೋಗಿಗಳು ಇನ್ನು ಅನೇಕ ಪವಾಡಗಳನ್ನು ಮಾಡಿದ್ದಾರೆ. ದಾಸೋಹದ ಕಾಲಕ್ಕೆ ಮಳೆಯನ್ನು ನಿಲ್ಲಿಸಿದ್ದು, ಇವತ್ತಿಗೂ ಕೂಡ ನರೇಂದ್ರದ ಮಳೆಯಪ್ಪಜ್ಜನ ಮಠದಲ್ಲಿ ಭಜನಾ ಸಪ್ತಾಹ ಮುಗಿದ ಮೇಲೆ ಮಳೆ ಬರುತ್ತದೆ ಎಂದು ಜನ ನಂಬಿರುತ್ತಾರೆ.

**ಜಾತ್ರೆ:**

ಜನರು ಪ್ರಾಚೀನ ಕಾಲದಿಂದಲೂ ನಂಬಿಕೊಂಡು ಬಂದಿದ್ದ ದೇವ–ದೇವತೆಗಳನ್ನು ಭಯ–ಭಕ್ತಿಯಿಂದ ಸಾಮಾಜಿಕವಾಗಿ ಪೂಜಿಸಿ, ಪ್ರಾರ್ಥಿಸುವ ಸಂಭ್ರಮದ ಜನಸಮೂಹವೇ 'ಜಾತ್ರೆ' ಎಂದೆನಿಸಿದೆ. ಈ ಜಾತ್ರೆಗಳು ಸಂಸ್ಕೃತಿ ಸಂವಹನದ ವಿಶಿಷ್ಟ ನೆಲೆಗಳಾಗಿ ರೂಪುಗೊಳ್ಳುತ್ತ ಬಂದಿದೆ. ಈ ದೃಷ್ಟಿಯಿಂದ ಜಾತ್ರೆ ಜನಪದ ಸಂಸ್ಕೃತಿಯ ಒಂದು ಸಂಕೀರ್ಣ ವೇದಿಕೆ ಎಂದು ಹೇಳಬಹುದು. ಜಾತ್ರೆ ನೆರವೇರದ ಯಾವ ಗ್ರಾಮವೂ ಇಲ್ಲ. ಮಿಶ್ರ ಸಂಸ್ಕೃತಿಯ ನಗರಗಳಲ್ಲಿಯೂ ಜಾತ್ರೆ ಜರುಗುವುದನ್ನು ನಾವು ಕಾಣುತ್ತೇವೆ. ಪ್ರತಿ ಜಾತ್ರೆಗೂ ಒಂದೊಂದು ಅಧಿದೇವತೆ ಗ್ರಾಮದೇವತೆ, ಪ್ರದೇಶ ದೇವತೆ ಇತ್ಯಾದಿಗಳಿಗೆ ಅವುಗಳದ್ದೇ ಆದ ಪ್ರತ್ಯೇಕ ಸ್ಥಳಪುರಾಣ, ಐತಿಹ್ಯ ಇದ್ದು ಇವುಗಳ ಹಿನ್ನೆಲೆಯಲ್ಲಿ ವರ್ಷದ ನಿರ್ಧಿಷ್ಟ ಕಾಲದಲ್ಲಿ ಜಾತ್ರೆಗಳ ವೈಭವ, ಜಾತ್ರೆಗೊಂದು ತೇರು, ಆ ತೇರಿನಲ್ಲಿ ಆಯಾ ದೇವತೆಗಳ ಪ್ರತಿಷ್ಠಾಪನೆ ಮತ್ತು ಜನಸಮೂಹ ಕೂಡಿ ತೇರನ್ನು ಎಳೆದು ಬಂದು 'ಪಾದಗಟ್ಟಿಗೆ' ಒಯ್ಯುವುದು ಮತ್ತೆ ಮರಳಿ ದೇವತೆಯ ಗುಡಿಗೆ ತಂದು ನಿಲ್ಲಿಸುವುದು ಇತ್ಯಾದಿ ಜಾತ್ರೆಯ ಒಂದು ಪ್ರಾಥಮಿಕ ಮತ್ತು ಪ್ರಧಾನ ಕ್ರಿಯೆ.[೭]

ಅಮ್ಮಿನಭಾವಿ ಪ್ರದೇಶದಲ್ಲಿ ಗ್ರಾಮದೇವತೆಯಾಗಿ ಕಂಗೊಳಿಸುವ ದ್ಯಾಮವ್ವ, ದುರ್ಗವ್ವ ದೇವತೆಗಳ ಜಾತ್ರೆಗಳು ಒಂದಿಲ್ಲೊಂದು ಹೆಸರಿನಲ್ಲಿ ಈಗಲೂ ನಡೆಯುತ್ತ ಬಂದಿದೆ. ಕಾರ ಹುಣ್ಣಿಮೆ (ಮಾರ್ಚ, ಏಪ್ರಿಲ್ ತಿಂಗಳಲ್ಲಿ) ಜಾತ್ರೆ ನಡೆಯುತ್ತದೆ. ಈ ಸಂದರ್ಭದಲ್ಲಿ ದೇವತೆಗಳ ಗುಡಿಗಳನ್ನು ಸ್ವಚ್ಛಗೊಳಿಸಿ, ಸುಣ್ಣ–ಬಣ್ಣ ಬಳಿದು ಅಲಂಕರಿಸುತ್ತಾರೆ. ನಂತರ ದೇವತೆಗೆ ಹೊಸಬಟ್ಟೆ ಉಡಿಸಿ, ಆಭರಣ ತೊಡಿಸಿ ವಿವಿಧ ತರಹದ ನೈವೇಧ್ಯ ಅರ್ಪಿಸಿ

ಸಂತೋಷಪಡಿಸುತ್ತಾರೆ. ವಯಕ್ತಿಕ ಹರಕೆಗಳ ಜೊತೆಗೆ ಸಾಮೂಹಿಕ ಹರಕೆಗಳನ್ನು ತೀರಿಸುವ ಸಂಪ್ರದಾಯ ಬದ್ಧವಾದ ಕಾರ್ಯಕ್ರಮ ಆಚರಿಸುವುದು. ಈ ಜಾತ್ರೆಗಳ ಕಾಲದಲ್ಲಿ ಮುತ್ತೈದೆಯರು ದುರ್ಗವ್ವ, ದ್ಯಾಮವ್ವ ಗುಡಿಗೆ (ಜುಲೈ ತಿಂಗಳ) ವರ್ಷದ ಮಂಗಳವಾರ ಮತ್ತು ಶುಕ್ರವಾರ ಉಡಿತುಂಬುತ್ತಾರೆ. ಅನ್ನದಾಸೋಹ ಭಜನೆ, ಡೊಳ್ಳಿನ ಮಜಲು ಇತ್ಯಾದಿ ಧ್ಯಾನ ಮತ್ತು ಮನರಂಜನೆ ಕಾರ್ಯಕ್ರಮಗಳು ಜರುಗುತ್ತವೆ.

ಅಮ್ಮಿನಭಾವಿ ಪ್ರದೇಶದಲ್ಲಿ ಗ್ರಾಮ ದೇವತೆಯ ಜಾತ್ರೆಯನ್ನು ಆಚರಿಸಲು ಊರ ರೈತರು ಹಿರಿಯರಾದ ದೇಸಾಯಿ, ದೇಶಪಾಂಡೆ ಮುಂತಾದವರು ಪಂಚಗೃಹ ಹಿರೇಮಠದಲ್ಲಿ ಕೂಡುತ್ತಿದ್ದರು. ಅಲ್ಲಿ ವರ್ಷದ ಜಾತ್ರೆ ಮಾಡಲು ಬೇಕಾಗುವ ಖರ್ಚಿನ ಹಣಕೂಡಿಸುವ ಸಲುವಾಗಿ ಯಾವ ರೀತಿಯ ಹಣವನ್ನು ಕೂಡಿಸಬೇಕೆಂದು ನಿರ್ಧರಿಸುತ್ತಿದ್ದರು. ಅಲ್ಲದೆ ಸುತ್ತ-ಮುತ್ತಲಿನ ಇನಾಮು ಗ್ರಾಮದ ರೈತರು ಕಡ್ಡಾಯವಾಗಿ ಇದರಲ್ಲಿ ಪಾಲ್ಗೊಳ್ಳಬೇಕಾಗುತ್ತಿತ್ತು. ಪ್ರತಿಯೊಬ್ಬರಿಗೂ ಎಕರೆಗಿಷ್ಟು ಹಣವನ್ನು ನಿಗದಿಪಡಿಸುತ್ತಿದ್ದರು. ನಂತರ ಹಣ ಸಂಗ್ರಹಿಸಲು ಊರ ಹಿರಿಯರು ಜೋಗಿತಿಯರೊಂದಿಗೆ ದೇವಿ ಪೂಜೆ ಮಾಡಿ, ಹಣ ಸಂಗ್ರಹಿಸಲು ಹೊರಡುವ ಮೊದಲು ದೇಸಾಯಿಯವರ ಮನೆಗೆ ಹಾಗೂ ರೈತ ಮುಖಂಡ ಕಟ್ಟಿಮನಿಯವರ ಮನೆಗೆ ಅವರ ಅಪ್ಪಣೆಯೊಂದಿಗೆ ಅವರುಗಳನ್ನೊಳಗೊಂಡಂತೆ ಗ್ರಾಮದ ಮುಖಂಡರು ಪಟ್ಟಿ (ಹಣ) ಸಂಗ್ರಹಿಸಲು ಹೋಗುತ್ತಿದ್ದರು. ಈ ರೀತಿಯಾಗಿ ಏಳರಿಂದ ಹತ್ತು ದಿನಗಳವರೆಗೆ ಗ್ರಾಮದಲ್ಲಿ ಸುತ್ತಾಡಿ ಪಟ್ಟಿ ಸಂಗ್ರಹಿಸುತ್ತಾರೆ. ಇಂದಿಗೂ ಸಾಂಪ್ರದಾಯಿಕವಾಗಿ ನಡೆದುಕೊಂಡು ಬಂದಿರುವ ಆಚರಣೆಯು ಜನರಲ್ಲಿ ಭಯ-ಭಕ್ತಿ ಮೂಡಿಸಿದೆ. ಜನರ ನಂಬಿಕೆಯ ಪ್ರಕಾರ ಶಕ್ತಿಯುತವಾದ ಗ್ರಾಮದೇವಿಯ ಗುಡಿಯಲ್ಲಿ ವರ್ಷದ ಬಿತ್ತನೆ ಕೆಲಸ ಪ್ರಾರಂಭವಾಗುವ ಪೂರ್ವದಲ್ಲಿ ೫ ಮಂಗಳವಾರಂತ ಬಿಟ್ಟು ಕೊನೆಯ ವಾರ ಮುತ್ತೈದೆಯರೆಲ್ಲಾ ಸೇರಿ ದೇವಿಗೆ ಉಡಿತುಂಬುತ್ತಾರೆ. ನಂತರ ದೇವತೆಯನ್ನು ಪಲ್ಲಕ್ಕಿಯಲ್ಲಿ ಉತ್ಸವಮೂರ್ತಿಯನ್ನಿಟ್ಟು ಭಕ್ತರು ಪಲ್ಲಕ್ಕಿಯನ್ನು ಹೊತ್ತುಕೊಂಡು ಗ್ರಾಮದ ಇನ್ನುಳಿದ ದೇವರ ಮತ್ತು ದೇವತೆಗಳ ದರ್ಶನ ಪಡೆಯುವುದು ಮುಖ್ಯವಾದ ಸಂಪ್ರದಾಯವಾಗಿದೆ. ಇದರೊಂದಿಗೆ ರೈತರು ತಮ್ಮ ಕೃಷಿ ಚಟುವಟಿಕೆಗಳನ್ನು ಪ್ರಾರಂಭಿಸುತ್ತಾರೆ. ಇದು ಸಾಂಪ್ರದಾಯಿಕವಾಗಿ ಇಂದಿಗೂ ಆಚರಣೆಯಲ್ಲಿರುವುದು ಕಂಡು ಬರುತ್ತದೆ. ಗ್ರಾಮದ ಜನರ ಸುಖ-ಶಾಂತಿ ಸಮೃದ್ಧತೆಗೆ ದೇವಿಯ ಶಕ್ತಿಯ ಪ್ರಭಾವವೇ ಶ್ರೀರಕ್ಷೆ ಎನ್ನುವುದು ಜನರ ನಂಬಿಕೆಯಾಗಿದೆ. ಆನರು ತಾವು ನಂಬಿಕೊಂಡು ಬಂದಿದ್ದ ದೇವ ದೇವತೆಗಳ ಹೆಸರಿನಲ್ಲಿ ಗುಡಿ-ಗುಂಡಾರಗಳನ್ನು ಕಟ್ಟಿಸಿ ವರ್ಷಕ್ಕೊಮ್ಮೆ ತಮಗೆ

ಅನುಕೂಲವಾದಾಗ ಜಾತ್ರೆ ನೆರವೇರಿಸುವರು. ಅವುಗಳಲ್ಲಿ ದ್ಯಾಮವ್ವ ಜಾತ್ರೆಯ ಜೊತೆಗೆ ಹೆಬ್ಬಳ್ಳಿಯ ಮೂಗಬಸವೇಶ್ವರ ಜಾತ್ರೆ, ಬನಶಂಕರಿ ಜಾತ್ರೆ, ಕಾಳಮ್ಮನ ಜಾತ್ರೆ, ಎಲ್ಲಮ್ಮನ ದೇವಿಯ ಜಾತ್ರೆ ನಡೆಯುತ್ತದೆ. ಇವು ಗುಡಿಗಳ ಜಾತ್ರೆಯಾದರೆ, ಶಿವಯೋಗಿಗಳ ಸ್ಮರಣಾರ್ಥವಾಗಿ ನಡೆಯುತ್ತ ಬಂದಿರುವ ಜಾತ್ರೆಗಳೇ ಮಠದ ಜಾತ್ರೆಗಳು ಅಮ್ಮಿನಭಾವಿ ಪಂಚಗೃಹ ಹಿರೇಮಠದಲ್ಲಿ ಪ್ರತಿವರ್ಷದ ಶ್ರಾವಣ ಮಾಸದಲ್ಲಿ ಪೂಜೆ, ಭಜನೆ, ಕೀರ್ತನೆಗಳು ನಡೆಯುತ್ತವೆ. ಹೆಬ್ಬಳ್ಳಿಯಲ್ಲಿ ಶಿವಾನಂದ ಸ್ವಾಮಿಮಠದ ಜಾತ್ರೋತ್ಸವ, ಸಿದ್ಧಾರೂಢರ ಆರಾಧನೆ ಹಾಗೂ ಜಾತ್ರೋತ್ಸವ ಹನುಮ ಜಯಂತಿ, ಚಿದಂಬರೇಶ್ವರ ಆರಾಧನೆ, ರಾಘವೇಂದ್ರ ಸ್ವಾಮಿಗಳ ಆರಾಧನೆ ಹೀಗೆ ಹಲವಾರು ಜಾತ್ರೋತ್ಸವಗಳು ನಡೆಯುತ್ತದೆ.

ಜಾತ್ರೆಯಲ್ಲಿ ಒಂದು ಕಡೆ ಉತ್ಸವ ಮೂರ್ತಿಯ ಮೆರವಣಿಗೆ ನಡೆದು ಹೋಗುತ್ತದೆ, ಇನ್ನೊಂದೆಡೆಗೆ ಆ ದೇವರಿಗೆ ಹರಕೆ ತೀರಿಸುವ, ಉರುಳುಸೇವೆ, ಬತ್ತಲೆಸೇವೆ ಸಲ್ಲಿಸುವ ಸಿಡಿ ಆಡುವ, ಅಗ್ನಿ ತುಳಿಯುವ, ಶಸ್ತ್ರ ಹಾಕಿಕೊಳ್ಳುವ, ವಾದ್ಯ ಚಲಗ ನುಡಿಸುವ, ಕಾಯಿ, ಕರ್ಪೂರ, ನೈವೇದ್ಯ ಅರ್ಪಿಸುವ ಮುಡುಪು ಇಡುವ, ಹುಂಡಿ ಹಾಕುವ ಮೊದಲಾದ ಕಾರ್ಯಕ್ರಮಗಳು ತಿಳಿದು–ತಿಳಿಯದೆಯೋ ಸಂಪ್ರದಾಯಕ್ಕೆ ಜೋತುಬಿದ್ದು ಸಾಗುತ್ತಲೇ ಇರುತ್ತದೆ.

ಹೀಗೆ ಜಾತ್ರೆಯ ನೆಪದಿಂದ ಜನ ಒಂದೆಡೆ ಸೇರುತ್ತಾರೆ. ಅವರವರ ಸಂಬಂಧಿದರು ಜಾತ್ರೆಗೆ ಬರುವುದರಿಂದ ಖರ್ಚು ಹೆಚ್ಚು, ತೇರು ಎಳೆದವು, ದೇವರಿಗೆ ಹಣ್ಣು–ಕಾಯಿ ಪರಿಸಿದೆವು ಎಂಬ ಸಮಾಧಾನ ಮಕ್ಕಳಿಗೆ ಮನರಂಜನೆ ವ್ಯಾಪಾರಿಗಳಿಗೆ ಧನಲಾಭ, ಸಾಹಿತಿ, ಕಲಾಕಾರರಿಗೆ ಪುರಸ್ಕಾರದ ಲಾಭ, ಪೂಜಾರಿಗಳಿಗೆ ದಕ್ಷಿಣೆ, ನೈವೇದ್ಯದ ಲಾಭ, ದೇವರಿಗೆ ಸುಣ್ಣ–ಬಣ್ಣ, ಎಣ್ಣೆ, ಬಟ್ಟೆಗಳ ಸಿಂಗಾರ, ಹೀಗೆ ಜಾತ್ರೆ 'ಜನಮರಳೂ ಜಾತ್ರೆ ಮರಳೂ'[೮] ಎಂಬಂತೆ ನಡೆದೇ ಹೋಗುತ್ತದೆ.

**ಉತ್ಸವ:**

ಉತ್ಸವವು ಸಾಮೂಹಿಕವಾದುದರಿಂದ ಅದರ ಯಶಸ್ಸಿಗೆ ಇದೇ ಊರಿನ ಅಥವಾ ಅನೇಕ ಗ್ರಾಮಗಳ ಸಹಕಾರ ಅಗತ್ಯವಾಗುತ್ತದೆ. ಇದರಿಂದಾಗಿ ಜನರ ನಡುವೆ ಸೌಹಾರ್ದ ಸಾಮರಸ್ಯಗಳು ಉಂಟಾಗುತ್ತದೆ. ಅನೇಕ ವೇಳೆ ಹಳೆಯ ವಿರಸ ವೈಷಮ್ಯಗಲು ತೊಲಗಿ ಸಮೂಹಿಕವಾಗಿ ಚಿತ್ತಶುದ್ಧಿಯಾಗಿ ಇಡೀ ಗ್ರಾಮದ ಜನರು ತಮ್ಮ ಪಂಗಡಗಳನ್ನು ಮರೆತು ಯಾವುದೇ ಭೇದ ಭಾವಗಳನ್ನು ಮಾಡದೇ ಎಲ್ಲರೂ ಭಾಗಿಗಳಾಗುತ್ತಾರೆ.

ಪ್ರಸ್ತುತ ಅಮ್ಮಿನಭಾವಿ ಪ್ರದೇಶದಲ್ಲಿ ಕಾರಹುಣ್ಣಿಮೆಯೆಂದು ಗ್ರಾಮದ ರಥೋತ್ಸವ ಜರುಗುತ್ತದೆ. ಆಗ ಮನರಂಜನೆ, ನಾಟಕ, ಕುಸ್ತಿ, ಜನಪದ ಲಾವಣೆ, ಡೊಳ್ಳಿನ ಮಜಲು ಇತ್ಯಾದಿ ಕಾರ್ಯಕ್ರಮಗಳು ನಡೆಯುತ್ತದೆ. ದೇವಸ್ಥಾನವನ್ನು ಬಿಟ್ಟು ರಥದಿಂದ ಪಾದಘಟ್ಟಕ್ಕೆ ಹೋಗಿ ಅಲ್ಲಿಯ ದೇವರನ್ನು ೧೧ ದಿನಗಳವರೆಗೆ ಸ್ಥಾಪಿಸಿ, ಪೂಜೆ ಸಲ್ಲಿಸುವ ಸಂಪ್ರದಾಯ ಇಂದಿಗೂ ಇದೆ. ರಥೋತ್ಸವದಲ್ಲಿ ಗ್ರಾಮದೇವತೆಗೆ ಅಂದರೆ ದ್ಯಾಮವ್ವನಿಗೆ ದೇಸಾಯಿಯರ ಕಡೆಯಿಂದ ಮಂಗಳ ಸೂತ್ರ ಕಟ್ಟುವ ಪದ್ಧತಿಯೊಂದಿಗೆ ಪ್ರತಿವರ್ಷವೂ ಉತ್ಸವ ನಡೆಯುತ್ತಾ ಸಾಗಿದೆ. ಅಮ್ಮಿನಭಾವಿ ಕಲ್ಮೇಶ್ವರ ದೇವಾಲಯದಲ್ಲಿ ಪ್ರತಿವರ್ಷ ಯುಗಾದಿಯ ಪಾಡ್ಯದಿನದಂದು ಪಲ್ಲಕ್ಕಿ ಉತ್ಸವ ನಡೆಯತ್ತದೆ. ಶಿವನ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿಟ್ಟು ಕುರುಬರ ದೇವಸ್ಥಾನವಾದ ಹಾಲುರೇವಣಸಿದ್ದ ದೇವಸ್ಥಾನದವರೆಗೆ ಮೆರವಣಿಗೆ ನಡೆಯುತ್ತದೆ. ನಂತರ ರೇವಣಸಿದ್ದ ದೇವಸ್ಥಾನದಲ್ಲಿ ಪೂಜೆ ಸಲ್ಲಿಸಿ ಪುನಃ ಕಲ್ಮೇಶ್ವರನಿಗೆ ಬಂದು ಮೂರ್ತಿಗೆ ಪೂಜೆ ಸಲ್ಲಿಸುವ ಸಂಪ್ರದಾಯವಿದೆ. ಗ್ರಾಮದ ಬಸವಣ್ಣ ದೇವರ ಉತ್ಸವವು ವಿಜಯದಶಮಿಯಂದು ಜರುಗುತ್ತದೆ. ಇದು ಈ ಉತ್ಸವದ ವಿಶೇಷತೆಯನ್ನು ಒಳಗೊಂಡಿದೆ. ಅಲ್ಲದೇ ಬಸವಣ್ಣ ದೇವರನ್ನು ಪಲ್ಲಕ್ಕಿಯಲ್ಲಿ ಇಟ್ಟು ಮೆರವಣಿಗೆ ನಡೆಸುತ್ತಾರೆ. ಈ ಪಲ್ಲಕ್ಕಿಯಲ್ಲಿ ಇಟ್ಟು ಮೆರವಣಿಗೆ ನಡೆಸುತ್ತಾರೆ. ಈ ಪಲ್ಲಕ್ಕಿಯು ದ್ಯಾಮವ್ವನ ಗುಡಿಗೆ ಹೋಗಿ ಅಲ್ಲಿ ದ್ಯಾಮವ್ವನ ಪಾಲಿಕೆ ಬಸವಣ್ಣನ ಪಾಲಿಕೆ, ಜಗದ ಪಾಲಿಕೆ, ಹೀಗೆ ೩ ಪಾಲಿಕೆ ಕೂಡಿಕೊಂಡು ಮುಂದೆ ಪಾದಗಟ್ಟಿಗೆ ಹೋಗಿಎ ನಿಲ್ಲುತ್ತದೆ. ಇಲ್ಲಿಂದ ರೇವುಣ ಸಿದ್ಧೇಶ್ವರ ಪಾಲಿಕೆ ಕೂಡಿಕೊಂಡು ಊರಿನ ಸೀಮೆಯ ಹತ್ತಿರವಿರುವ ಬನ್ನಿಗಿಡದ ಹತ್ತಿರ ಬಂದು ಸೇರುತ್ತಾರೆ. ಈ ಒಂದು ಸ್ಥಳಕ್ಕೆ ಹಿರೇಮಠದ ಸ್ವಾಮಿಗಳನ್ನು ಬರಮಾಡಿಕೊಂಡು ಅವರ ಪಾದಪೂಜೆಯನ್ನು ಮಾಡುವುದು ಸಂಪ್ರದಾಯವಾಗಿದೆ. ನಂತರ ಜನರು ಅವರಿಗೆ ಬನ್ನಿಯನ್ನು ಕೊಟ್ಟು ಅವರಿಂದ ಆಶೀರ್ವಾದ ಪಡೆದುಕೊಂಡು ಕಾಣಿಕೆಯನ್ನು ಸಲ್ಲಿಸುವುದರೊಂದಿಗೆ ಸಾಮೂಹಿಕವಾಗಿ ಬನ್ನಿಕೊಡುವ ಕಾರ್ಯಕ್ರಮವು ಜರುಗುವುದು. ಇದು ಇಂದಿಗೂ ಕೂಡಾ ನಡೆದುಕೊಂಡು ಬರುತ್ತಿದೆ. ಈ ರೀತಿಯಾಗಿ ಬಸವಣ್ಣ ದೇವರ ಉತ್ಸವ ಅತಿ ವಿಜೃಂಭಣೆಯಿಂದ ನಡೆಯುತ್ತದೆ. ಇದೇ ದೇವಾಲಯದಲ್ಲಿ ಪ್ರತಿವರ್ಷ ಮಾರ್ಚ ತಿಂಗಳಲ್ಲಿ ಬರುವ ದವನದ ಹುಣ್ಣಿಮೆಯ ದಿನ ಬಸವಣ್ಣ ದೇವರ ಜಾತ್ರೆ ನಡೆಯುತ್ತದೆ. ಹುಣ್ಣಿಮೆಯ ಮುನ್ನಾದಿನದಂದು ರಾತ್ರಿ ಊರೊಳಗೆ ಹುತ್ತಯ್ಯನ ಉತ್ಸವ ನಡೆಯುತ್ತದೆ. ಇದೇ ದಿನ ಸಾಯಂಕಾಲ ೪ ಗಂಟೆಗೆ ರಥೋತ್ಸವ ಜರುಗುತ್ತದೆ. ರಥದಲ್ಲಿ ಪೂಜಾರ ಮನತನದವರು

ರಥ ಎಂದಾಗ ಮಾತ್ರ ರಥ ಮುಂದ ಸಾಗುತ್ತದೆ ಎಂಬ ನಂಬಿಕೆ ಇದೆ. ರಥೋತ್ಸವವು ಬಸವಣ್ಣ ದೇವರ ಗುಡಿಯಿಂದ ಬಸ್ ನಿಲ್ದಾಣದವರೆಗೆ ಹೋಗಿ ಪುನಃ ಗುಡಿಯ ಮುಂದೆ ರಥ ನಿಲ್ಲುತ್ತದೆ. ಇಂದಿನ ಪೂಜಾರಿ ಮನೆತವನಾದ ಗಟ್ಟಿಗೆಪ್ಪ ಎನ್ನುವವನಿಗೆ ಊರ ಜನರು ದೇವರು ಎಂದು ಕರೆಯುವ ವಾಡಿಕೆ ಇದೆ.

ಉತ್ಸವ ಆದ ೩ ದಿನಕ್ಕೆ ಕಡಬಿನ ಕಾಳಗ ಮಾಡುತ್ತಾರೆ. ಪೂಜಾರಿಯ ಮನೆಯಲ್ಲಿ ವಿಶೇಷವಾಗಿ ಕಡಬು ಮಾಡುತ್ತಾರೆ. ನಂತರ ಆ ಕಡಬನ್ನು ತೇರಿಗೆ ಎಸೆಯುತ್ತಾರೆ ಇದಾದ ೫ನೇಯ ದಿನಕ್ಕೆ ತೇರಿನ ಕಳಸ ಇಳಿಸುವ ಕಾರ್ಯಕ್ರಮ ನಡೆಯುತ್ತದೆ.

ಹೆಬ್ಬಳ್ಳಿಯಲ್ಲಿ ವೀರಭದ್ರ ರಥೋತ್ಸವವನ್ನು ದವನದ ಹುಣ್ಣಿಮೆಯ ದಿನ ಆಚರಿಸುತ್ತಾರೆ. ಬನಶಂಕರಿ ಜಾತ್ರೆಯಲ್ಲಿ ಬನದ ಹುಣ್ಣಿವೆಯೆಂದು ರಥೋತ್ಸವ ಜರುಗುತ್ತದೆ. ಕಾಳಮ್ಮನ ರಥೋತ್ಸವದ ದೀಪಾವಳಿ ದಿನದಂದು ನಡೆಯುತ್ತದೆ.

ನರೇಂದ್ರದ ಕಲ್ಮೇಶ್ವರ ದೇವಾಲಯದಲ್ಲಿ ಶಿವರಾತ್ರಿಯ ದಿನದಂದು ಪಲ್ಲಕ್ಕಿ ಉತ್ಸವ ನಡೆಯುತ್ತದೆ. ದಿನಾಲೂ ಪೂಜೆ ಪುನಸ್ಕಾರ, ಭಜನೆ ನಡೆಯುತ್ತದೆ. ಅಲ್ಲದೆ ಪ್ರತಿ ಅಮವಾಸ್ಯೆಗೆ ಪರುವ ಮಾಡುತ್ತಾರೆ. ವೀರಭದ್ರ ದೇವಾಲಯದಲ್ಲಿ ಬಸವ ಜಯಂತಿಗೆ ಪಲ್ಲಕ್ಕಿ ಉತ್ಸವ ಜರುಗುತ್ತದೆ.

ಅಮ್ಮಿನಭಾವಿಯಲ್ಲಿ ಈಶ್ವರ ಗುಡಿ ಇದ್ದು, ಪ್ರತಿವರ್ಷ ಕಡೆಯ ಶ್ರಾವಣಕ್ಕೆ ಈಶ್ವರ ದೇವರ ರಥೋತ್ಸವವು ಜರುಗುತ್ತದೆ. ರಥದಲ್ಲಿ ಈಶ್ವರ ದೇವರ ಮೂರ್ತಿಯನ್ನು ಇಟ್ಟು ಊರ ಜನರು ಬಾವಿಯವರೆಗೆ ಮೆರವಣಿಗೆಯನ್ನು ಮಾಡುತ್ತಾರೆ. ನಂತರ ಬಾವಿಯ ಹತ್ತಿರ ಪೂಜೆ ಮಾಡಿ ಪುನಃ ಗುಡಿಗೆ ಬರುವ ಬಹು ಪುರಾತನ ಕಾಲದಿಂದಲೂ ನಡೆದು ಬಂದ ಸಾಂಪ್ರದಾಯವಾಗಿದೆ. ಪಂಚಗೃಹ ದೊರೆ ಮಠದಲ್ಲಿ ಗುರುಗಳ ಜನ್ಮ ಜಯಂತ್ಯೋತ್ಸವಗಳು ಬಂದಾಗ ಮಾತ್ರ ಉತ್ಸವಾದಿಗಳನ್ನು ಈ ಮಠದ ವತಿಯಿಂದ ಆಚರಿಸುತ್ತಾರೆ.

**ಅಡಿಟಿಪ್ಪಣಿಗಳು:**

---

೧ ಮಂಜುನಾಥ ಬೇವಿನಕಟ್ಟಿ, ಕನ್ನಡ ಜನಪದ ನಂಬಿಕೆಗಳು, ೨೦೦೭, ಪುಟ. ೧೩೨.

೨ ಸಂತೋಷ ಚೊಕ್ಕಾಡಿ, ೧೯೮೮, ಕೃಷಿ ನಂಬಿಕೆಗಳು, ಪುಟ. ೩೯.

೩ ಡಿ.ಕೆ. ರಾಜೇಂದ್ರ, ಜನಪದ ಸಮನ್ವಯ ೧೯೯೩, ಪುಟ. ೨೭-೩೧

೪ ಸಿದ್ದಲಿಂಗಯ್ಯ, ಗ್ರಾಮದೇವತೆಗಳು, ಮೂಲ ಭಾರತಿ ಪ್ರಕಾಶನ, ಬೆಂಗಳೂರು, ೧೯೯೭, ಪುಟ. ೭೧

೫ ಚನ್ನಣ್ಣ ವಾಲೀಕಾರ, ಜಾತ್ರೆಗಳ ಪೌರಾಣಿಕ ಹಿನ್ನಲೆ, ೧೯೮೮, ಪುಟ. ೧೭೭

೬ ಸುಭಾಸ ಬ. ಪೂಜಾರ, ತಾಳಿಕೋಟೆಯ ಕರಾಳ ಐತಿಹ್ಯ, ಪ್ರಜಾವಾಣಿ, ೨೫ ಸೆಪ್ಟೆಂಬರ ೧೯೯೪

೭ ದೇವೆಂದ್ರಕುಮಾರ ಹಕರಾರಿ, ಜಾತ್ರೆಗಳು ಮತ್ತು ಕಲೆ, ೧೯೮೮, ಪುಟ. ೫೮

೮ ಮಲ್ಲಿಕಾರ್ಜುನ ಶಿ. ಲಕ್ಕಿ, ಉತ್ತರ ಕರ್ನಾಟಕದ ಜಾತ್ರೆಗಲು, ೧೯೮೮, ಪುಟ. ೧೦

೯ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಲಹೆ ಸಹಕಾರ ನೀಡಿದವರು ಬಸವರಾಜ ಕುಲಕರ್ಣಿ

## ಅಧ್ಯಾಯ – ಆರು

## ಸಮಾರೋಪ

ಭಾರತವು ಪ್ರಾಚೀನ ಕಾಲದಿಂದಲೂ ಸಾಂಸ್ಕೃತಿಕವಾಗಿ ತನ್ನದೇ ಆದಂತಹ ಮಹತ್ವದ ಸ್ಥಾನವನ್ನು ಉಳಿಸಿಕೊಂಡು ಬಂದಿದೆ. ಇದರಲ್ಲಿ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ ಒಂದು ಸನಾತನ ವೃಕ್ಷವಿದ್ದಂತೆ. ಇಲ್ಲಿ ಅನೇಕ ರಾಜಮನೆತನಗಳು ಆಡಳಿತ ನಡೆಸಿವೆ. ಅನೇಕ ಧರ್ಮಗಳು ನೆಲೆ ಪಡೆದಿವೆ. ಹೀಗೆ ಈ ಪ್ರದೇಶ ಕಾಲದಿಂದ ಕಾಲಕ್ಕೆ ಐತಿಹಾಸಿಕ ನೆಲೆಯಲ್ಲಿ ತನ್ನನ್ನು ಗುರುತಿಸಿಕೊಳ್ಳುತ್ತ ಬೆಳೆದು ಬಂದಿದೆ. ಸಂಸ್ಕೃತಿಯು ವ್ಯಕ್ತಗೊಳ್ಳುವ ಕಲಾಮಾಧ್ಯಮಗಳನ್ನು ಆ ಜೀವನ ದೃಷ್ಟಿಗೆ ಪೋಷಕವಾದ ಭಾರತೀಯ ಸಂಸ್ಕೃತಿಯನ್ನು ಕನ್ನಡ ನಾಡ ಸಂಸ್ಕೃತಿ ತನ್ನಲ್ಲಿ ಅಳವಡಿಸಿಕೊಂಡಂತೆ, ಪ್ರಸ್ತುತ ಧಾರವಾಡ ಜಿಲ್ಲೆಯ ಅಮ್ಮಿನಭಾವಿ ಪ್ರದೇಶದ ಸಾಂಸ್ಕೃತಿಕ ಬದುಕು ಕರ್ನಾಟಕದ ಸಂಸ್ಕೃತಿಯ ಎಲ್ಲ ಸತ್ವವನ್ನು ತನ್ನಲ್ಲಿ ಮೈಗೂಡಿಸಿಕೊಂಡಿದೆ ಎಂಬುದು ಈ ಪ್ರದೇಶದ ಪ್ರಾಚ್ಯಾವಶೇಷಗಳಾದ ಸ್ಮಾರಕಗಳು, ಶಾಸನಗಳು, ಶಿಲ್ಪಗಳಿಂದ ತಿಳಿದು ಬರುತ್ತದೆ. ಅಲ್ಲದೆ ಈ ಪ್ರದೇಶವನ್ನು ಆಳಿದ ವಿವಿಧ ರಾಜವಂಶಗಳು ಧರ್ಮ, ಸಾಹಿತ್ಯ, ಸಂಗೀತ, ನೃತ್ಯ, ಕಲೆ ಮತ್ತು ಕುಶಲತೆಗಳನ್ನು ಪೋಷಿಸಿ, ಬೆಳೆಸಿ, ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ್ದಾರೆ.

ಒಂದು ಪ್ರದೇಶದ ಇತಿಹಾಸ ರಚನೆಯಲ್ಲಿ ಗ್ರಾಮಗಳ ಪಾತ್ರ ಬಹುದೊಡ್ಡದು. ಒಂದೊಂದು ಗ್ರಾಮಗಳು ಪ್ರದೇಶದ ನರನಾಡಿಗಳು ಎಂಬುದನ್ನು ಹಿನ್ನೆಲೆಯಾಗಿಟ್ಟುಕೊಂಡು ಅಲ್ಲಿ ದೊರೆಯುವ ಅವಶೇಷಗಳಿಂದ ಅಮ್ಮಿನಭಾವಿ ಪರಿಸರದ ಸಾಂಸ್ಕೃತಿಕ ಅಧ್ಯಯನದ ವಿವಿಧ ಮುಖಗಳನ್ನು ಪರಿಚಯಿಸಲಾಗಿದೆ. ಈ ಪ್ರದೇಶದಲ್ಲಿ ದೊರೆಯುವ ಸ್ಮಾರಕಗಳು, ಶಾಸನಗಳು, ಶಿಲ್ಪಗಳು ಅಮ್ಮಿನಭಾವಿ ಪರಿಸರದ ಸಾಂಸ್ಕೃತಿಕ ಅಧ್ಯಯನದಲ್ಲಿ ಹಾಗೂ ಈ ಪ್ರದೇಶದ ಚರಿತ್ರೆಯ ವಿವಿಧ ಮುಖಗಳನ್ನ ಅರ್ಥೈಸಿಕೊಳ್ಳುವಲ್ಲಿ ತುಂಬಾ ಸಹಾಯಕವಾಗಿದೆ.

ಕರ್ನಾಟಕದ ವಾಯುವ್ಯ ಭಾಗದಲ್ಲಿರುವ ಧಾರವಾಡ ಜಿಲ್ಲೆಯು ಐದು ತಾಲೂಕುಗಳನ್ನು ತನ್ನ ವ್ಯಾಪ್ತಿಯಲ್ಲಿ ಒಳಗೊಂಡಿದೆ. ಪ್ರಸ್ತುತ ಅಧ್ಯಯನದ ಪ್ರದೇಶವಾದ ಅಮ್ಮಿನಭಾವಿ ಧಾರವಾಡ ತಾಲೂಕಿನಲ್ಲಿ ಬರುವಂತಹದ್ದು. ಅಮ್ಮಿನಭಾವಿ ಪರಿಸರವು ಭೌಗೋಳಿಕವಾಗಿ ವಿಸ್ತಾರವಾದ ಪ್ರದೇಶವನ್ನು ಹೊಂದಿ, ನೈಸರ್ಗಿಕ ಸಂಪನ್ಮೂಲಗಳನ್ನು ತನ್ನ ಮಡಿಲಲ್ಲಿ ಉಳಿಸಿಕೊಂಡಿದೆ. ಇವು ಈ ಪರಿಸರವನ್ನು ಅಧ್ಯಯನ ಮಾಡಲಿಕ್ಕೆ ಹಾಗೂ ಶ್ರೀಮಂತಗೊಳಿಸಲು ಪೂರಕವಾಗಿವೆ. ಅಮ್ಮಿನಭಾವಿಯು ಭೌಗೋಳಿಕವಾಗಿ ಉತ್ತಮ ವಾಯುಗುಣ ಹಾಗೂ ಅಷ್ಟೇ ಫಲವತ್ತಾದ ಮಣ್ಣಿನಿಂದ ಕೂಡಿ ಕೃಷಿ ಚಟುವಟಿಕೆಗೆ ಹಾಗೂ ಕೈಗಾರಿಕೆಗೆ ಉತ್ತಮವಾಗಿದೆ.

ಪ್ರಸ್ತುತ ಅಧ್ಯಯನದ ಪ್ರದೇಶವು ಐತಿಹಾಸಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಉತ್ತುಂಗದಲ್ಲಿತ್ತು ಎಂಬುದಕ್ಕೆ ಇಲ್ಲಿ ದೊರೆಯುವ ಸ್ಮಾರಕಗಳು, ಶಾಸನಗಳು, ಶಿಲ್ಪಗಳು, ಅಲ್ಲದೆ ಸಾಹಿತ್ಯಿಕ ಆಧಾರಗಳು ಮುಂತಾದವುಗಳು ನಮಗೆ ಮಾಹಿತಿಯನ್ನು ಒದಗಿಸುತ್ತವೆ. ಪ್ರಾಗಿತಿಹಾಸ ಕಾಲದಿಂದಲೇ ಈ ಒಂದು ಪ್ರದೇಶದಲ್ಲಿ ಮಾನವನ ಚಟುವಟಿಕೆಗಳ ಕುರುಹುಗಳು ಇದ್ದ ನಮಗೆ ಅಲ್ಲಲ್ಲಿ ದೊರಕುತ್ತವೆ. ಅಮ್ಮಿನಭಾವಿ ಪರಿಸರದ ಬೆನಕನಮಟ್ಟಿಯಲ್ಲಿ ನವಶಿಲಾಯುಗ ಕಾಲದ ಆಯುಧೋಪಕರಣಗಳು ದೊರೆತಿವೆ. ಅಲ್ಲದೆ ವೀರಾಪುರಗಳಲ್ಲಿಯೂ ಕ್ರಮವಾಗಿ ಹಳೆಶಿಲಾಯುಗ, ಮಧ್ಯಹಳೆಶಿಲಾಯುಗ, ಸೂಕ್ಷ್ಮಶಿಲಾಯುಗದ ನೆಲೆಗಳನ್ನು ಇತಿಹಾಸ ತಜ್ಞರು ಬೆಳಕಿಗೆ ತಂದಿದ್ದಾರೆ. ಈ ಪ್ರದೇಶದಲ್ಲಿರುವಂತ ಸಂಸ್ಕೃತಿಯನ್ನು ತಿಳಿಯಲು ಈ ಮೇಲಿನ ಅಂಶಗಳು ಸಹಾಯಕವಾಗಿವೆ.

ಈ ಪ್ರದೇಶದ ರಾಜಕೀಯ ಇತಿಹಾಸವು ಶಾತವಾಹನರ ಅರಸರ ಕಾಲದಿಂದ ಆರಂಭವಾಗುತ್ತದೆ. ಈ ವಂಶದ ರಾಜರ ಆಳ್ವಿಕೆಯ ಬಗ್ಗೆ ಈ ಪರಿಸರದಲ್ಲಿ ಯಾವುದೇ ಮಾಹಿತಿ ದೊರೆಯದಿದ್ದರೂ ಸಹ ಸುತ್ತಮುತ್ತಲಿನ ಪರಿಸರದಲ್ಲಿ ಇವರು ಆಡಳಿತದ ನಡೆಸಿದ್ದರ ಬಗ್ಗೆ ಮಾಹಿತಿ ತಿಳಿದುಬರುತ್ತದೆ. ಬನವಾಸಿ ಕದಂಬರ ವಂಶಜರೆಂದು ಆಳ್ವಿಕೆ ಮಾಡಿದ ಗೋವೆಯ ಕದಂಬರು, ಹಾನಗಲ್ಲ ಕದಂಬರು ಇವರು ಬನವಾಸಿ, ಹಲಸಿ ಪ್ರದೇಶಗಳನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಹೀಗಾಗಿ ಈ ವಂಶಜರು ಈ ಪ್ರದೇಶದಲ್ಲಿ ಆಳಿದ್ದರಿಬಹುದೆಂದು ಊಹಿಸಬಹುದಾಗಿದೆ.

ಬಾದಾಮಿ ಚಾಲುಕ್ಯರ ಆಳ್ವಿಕೆಯ ಕಾಲದ ಯಾವುದೇ ಮಾಹಿತಿ ದೊರೆಯುವುದಿಲ್ಲ. ನಂತರ ಬರುವ ರಾಷ್ಟ್ರಕೂಟರು ಈ ಪ್ರದೇಶದಲ್ಲಿ ತಮ್ಮ ಪ್ರಭಾವವನ್ನು ಬೀರಿದ್ದಾರೆ.

ರಾಷ್ಟ್ರಕೂಟರ ಅರಸರಾದ ಅಮೋಘವರ್ಷ, ನಾಲ್ವಡಿಗೋವಿಂದ, ಮುಮ್ಮಡಿ ಕೃಷ್ಣ ಇವರ ಕಾಲದ ಉಲ್ಲೇಖಗಳು ತಂಬೂರು ಶಾಸನವು ಉಲ್ಲೇಖಿಸುತ್ತದೆ. ಪಲಸಿಗೆ ೧೨೦೦೦ ಎಂಬ ಆಡಳಿತ ವಿಭಾಗವು ಇವರಿಗೆ ಸಂಬಂಧಿಸಿದ್ದಾಗಿದೆ. ಇವರ ನಂತರ ಬರುವ ಕಲ್ಯಾಣ ಚಾಲುಕ್ಯರ ಇಮ್ಮಡಿ ತೈಲಪ, ಆರನೆ ವಿಕ್ರಮಾದಿತ್ಯ ಪ್ರಸಿದ್ಧ ಅರಸರ ಆಡಳಿತಕ್ಕೆ ಒಳಪಟ್ಟಿದೆ. ಈ ಪ್ರದೇಶವು ಅನೇಕ ದೇವಾಲಯಗಳು, ಶಾಸನಗಳು, ಶಿಲ್ಪಗಳು ಇವರ ಕಾಲದಲ್ಲಿ ನಿರ್ಮಾಣವಾದವು. ಕಲಚುರಿಗಳ ಕಾಲದಲ್ಲಿ ಈ ಪ್ರದೇಶವು ಸಮೃದ್ಧವಾಗಿದ್ದರ ಬಗ್ಗೆ ಮಾಹಿತಿ ದೊರೆಯುತ್ತದೆ. ಕಲ್ಯಾಣದ ಚಾಲುಕ್ಯರ ನಂತರ ದೇವಗಿರಿಯ ಯಾದವರು ಪ್ರಾಬಲ್ಯಕ್ಕೆ ಬಂದರು. ಇವರ ಆಳ್ವಿಕೆಯ ಕುರುಹು ಛಬ್ಬಿಯಲ್ಲಿ ಒಂದು ಶಾಸನ ದೊರೆಯುತ್ತದೆ. ಇದು ಕನ್ನರದೇವನ ಮಗ ರಾಮಚಂದ್ರದೇವನು ಅಧಿಕಾರಕ್ಕೆ ಬಂದದ್ದನ್ನು ಉಲ್ಲೇಖಿಸುತ್ತದೆ. ಇವರ ಆಳ್ವಿಕೆಗೆ ಬೆಳ್ವಲ, ಪುಲಿಗೇರಿ, ಮಾಸವಾಡಿ, ಹಾನಗಲ್ಲು, ಗುತ್ತೂರು, ನಾಗರಖಂಡ ಮುಂತಾದ ಗ್ರಾಮಗಳು ಒಳಪಟ್ಟಿದ್ದವು. ಹೊಯ್ಸಳರ ಆಳ್ವಿಕೆಯು ಧಾರವಾಡ ಜಿಲ್ಲೆಯು ಒಳಪಟ್ಟಿತ್ತೆಂಬುದಕ್ಕೆ ಸುಮಾರು ೭ ಶಾಸನಗಳು ದೊರೆಯುತ್ತವೆ. ವೀರಬಲ್ಲಾಳನನ್ನು ಪ್ರಭಾವಿ ಅರಸನಾಗಿದ್ದ ಬಗ್ಗೆ ಶಾಸನಗಳು ತಿಳಿಸುತ್ತವೆ. ವಿಜಯನಗರದ ಅರಸರ ಕಾಲಕ್ಕಂತೂ ಧಾರವಾಡ ಜಿಲ್ಲೆಯು ಒಂದು ಭಾಗವಾಗಿ ಕಂಡು ಬರುತ್ತದೆ. ಜಿಲ್ಲೆಯ ಗುಡಿಸಾಗರ, ಅಮ್ಮಿನಭಾವಿ, ದೇವರ ಹುಬ್ಬಳ್ಳಿ, ಬೆಳವಟಿಗೆಯು ಕ್ರಿ.ಶ. ೧೫೪೭ರ ಶಾಸನಗಳು ನಾವಿಂದರ ತೆರಿಗೆ ಅಂದರೆ ಕ್ಷೌರಿಕರಿಗೆ ತೆರಿಗೆ ವಿನಾಯತಿ ನೀಡಿದ ಬಗ್ಗೆ ಶಾಸನಗಳು ತಿಳಿಸುತ್ತವೆ.

ಪ್ರಸ್ತುತ ಪ್ರದೇಶದಲ್ಲಿ ಆಡಳಿತದ ಅನುಕೂಲಕ್ಕಾಗಿ ವಿಭಾಗಗಳನ್ನು ಮಾಡಿರುವುದು ಕಂಡಬರುತ್ತದೆ. ಪಲಸಿಗೆ–೧೨೦೦೦, ಕುಂದೂರು–೫೦೦, ಉಣಕಲ್ಲು–೩೦, ಸಬ್ಬಿ–೩೦, ಪಾನುಂಗಲ್ಲು–೫೦೦, ಕೊಂತಕುಳಿ–೩೦, ವೇಳುಗ್ರಾಮೆ–೭೦, ಉತ್ಸುಗ್ರಾಮ–೩–, ಕಾದರವಳ್ಳಿ–೩೦, ಇವುಗಳು ಮುಖ್ಯವಾದ ವ್ಯಾಪಾರದ ಪಟ್ಟಣಗಳಾಗಿ ಹಾಗೂ ಕೇಂದ್ರಸ್ಥಾನಗಳಾಗಿ ಕಾರ್ಯಚಟುವಟಿಕೆ ಮಾಡಿದ್ದರ ಬಗ್ಗೆ ತಿಳಿದು ಬರುತ್ತದೆ. ಸಾಮಾಜಿಕ ವ್ಯವಸ್ಥೆಯು ನಾಲ್ಕು ಅಂತಸ್ತುಗಳನ್ನು ಒಳಗೊಂಡಿತ್ತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಸ್ತರದ ಮೇಲೆ ನಿಂತ ಬಗ್ಗೆ ತಿಳಿದುಬರುತ್ತದೆ. ಬ್ರಾಹ್ಮಣರು ಉನ್ನತವಾದ ಸ್ಥಾನಮಾನವನ್ನು ಪಡೆದುಕೊಂಡಿದ್ದರು. ಸರ್ವಾಧಿಕಾರಿ ಮಲ್ಲಸೆಟ್ಟಿಯು ಹೆಬ್ಬಳ್ಳಿಯಲ್ಲಿ ಬ್ರಾಹ್ಮಣರಿಗೆ ನಿವೇಶನ, ಅಗ್ರಹಾರ ಮತ್ತು ಬ್ರಹ್ಮಪುರಿಗಳನ್ನ ದತ್ತಿಯನ್ನಾಗಿ ನೀಡಿದ್ದಾನೆ. ಬ್ರಾಹ್ಮಣರ ನಂತರದ ಸ್ಥಾನ ಕ್ಷತ್ರಿಯರದಾಗಿತ್ತು, ಮುಖ್ಯವಾಗಿ ಇವರ ಕರ್ತವ್ಯ ಸಾಮಾಜ್ರ್ಯವನ್ನು ರಕ್ಷಿಸುವುದು ಮತ್ತು ಆಸ್ತಿ–ಪಾಸ್ತಿಗಳನ್ನು ಕಾಪಾಡುವುದಾಗಿತ್ತು. ಇವರು ಎಂತಹ ಪರಿಸ್ಥಿತಿಯಲ್ಲಿಯೂ ಶೌರ್ಯ, ಪರಾಕ್ರಮದಿಂದ ಸಮಾಜವನ್ನು ರಕ್ಷಿಸುವುದಾಗಿತ್ತು.

ವ್ಯಾಪಾರಿ ವೃತ್ತಿಯನ್ನು ಮಾಡುತ್ತಿದ್ದು, ವೈಶ್ಯರು ಅನೇಕ ವೃತ್ತಿಯಲ್ಲಿ ತೊಡಗಿಕೊಂಡಿರುವ ಉತ್ಪಾದನಾ ವರ್ಗವು ರಾಜ್ಯದ ಬೆನ್ನೆಲುಬಾಗಿತ್ತು.

ಧಾರ್ಮಿಕ ಚರಿತ್ರೆಯಲ್ಲಿ ಶೈವ, ವೈಷ್ಣವ, ಶಾಕ್ತ, ವೀರಶೈವ, ಜೈನ ಧರ್ಮಗಳು ಮುಖ್ಯವಾದವು. ಅಮ್ಮಿನಭಾವಿ ಪರಿಸರದಲ್ಲಿ ಶೈವ ಧರ್ಮದ ಪ್ರಭಾವವನ್ನು ಈ ಅಧ್ಯಯನದ ಮೂಲಕ ಅರಿಯಬಹುದಾಗಿದೆ. ಈ ಭಾಗದಲ್ಲಿ ಶೈವ ಧರ್ಮವು ಪ್ರಬಲ ಧರ್ಮವಾಗಿತ್ತೆಂದು ಇಲ್ಲಿ ದೊರೆತ ಆಕರಗಳಿಂದ ಪುಷ್ಠಿಕರಿಸುತ್ತದೆ. ಈ ಪರಿಸರದಲ್ಲಿ ವೈಷ್ಣವ ಧರ್ಮವು ಹೆಚ್ಚು ಪ್ರಭಾವಶಾಲಿಯಾಗಿ ಇರದಿದ್ದರೂ, ಸಿಕ್ಕ ಕೆಲವು ಆಕರಗಳಿಂದ ಅದರ ಅಸ್ತಿತ್ವವನ್ನು ಅರಿಯಬಹುದಾಗಿದೆ. ಜೈನ ಧರ್ಮವು ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ಸಮಕಾಲಿನ ಧರ್ಮಗಳೊಂದಿಗೆ ಸ್ಪಂದಿಸಿ ವಿನೂತನ ಮಾರ್ಗವನ್ನು ಅನುಸರಿಸಿಕೊಂಡ ಬಂದಿರುವ ಧರ್ಮವಾಗಿದೆ. ಈ ಪ್ರದೇಶದಲ್ಲಿ ಪ್ರಭಾವಿತ ಧರ್ಮವಾಗಿತ್ತು ಎಂದು ಪರಿಗಣಿಸಬಹುದಾಗಿದೆ. ಆರ್ಥಿಕ ಸ್ಥಿತಿಯಲ್ಲಿ ಕೃಷಿ, ಗುಡಿ ಕೈಗಾರಿಕೆ, ನೀರಾವರಿ, ವ್ಯಾಪಾರ ವಾಣಿಜ್ಯ, ಸಾರಿಗೆ–ಸಂಪರ್ಕ ಮುಂತಾದವುಗಳನ್ನು ಒಳಗೊಂಡಿರುವುದು ಕಂಡು ಬರುತ್ತದೆ. ಸಮಾಜದ ಮಹತ್ವದ ಅಂಶಗಳಾದ ಆರ್ಥಿಕ ಕ್ಷೇತ್ರದಲ್ಲಿ ಸುಖ–ಸಮೃದ್ಧಿಯನ್ನು ಈ ಪರಿಸರದ ಶಾಸನಗಳು ವಿವರಿಸುತ್ತವೆ. ವೃತ್ತಿ ಸಂಘಗಳು ಕೈಗಾರಿಕೆಗಳು, ತೂಕ, ಅಳತೆ, ನಾಣ್ಯ, ಸಾರ್ವಜನಿಕ ವೆಚ್ಚ ಮುಂತಾದ ಆರ್ಥಿಕ ಅಂಶಗಳು ಈ ಪ್ರಬಂಧದಲ್ಲಿ ಅಡಕವಾಗಿವೆ.

ವಾಸ್ತು ಮತ್ತು ಮೂರ್ತಿಶಿಲ್ಪಕ್ಕೆ ಸಂಬಂಧಿಸಿದಂತೆ ಕರ್ನಾಟಕದ ಎಲ್ಲಾ ವೈಶಿಷ್ಟ್ಯಗಳನ್ನು ಈ ಜಿಲ್ಲೆಯು ಮೈಗೂಡಿಸಿಕೊಂಡಿರುವುದಲ್ಲದೆ, ಕರ್ನಾಟಕದ ಕಲೆಯ ಜಗತ್ತಿಗೆ ತನ್ನದೇ ಅಪೂರ್ವಕಾಣಿಕೆಯನ್ನು ಅರ್ಪಿಸಿದೆ. ಐತಿಹಾಸಿಕವಾಗಿ ಸಾಂಸ್ಕೃತಿಕವಾಗಿ ಮತ್ತು ಧಾರ್ಮಿಕವಾಗಿ ಪ್ರಸಿದ್ಧಿಗೊಂಡ ಈ ಪ್ರದೇಶವು ಅಸಂಖ್ಯ ದೇವಾಲಯ ಶಿಲ್ಪಗಳನ್ನು ಹೊಂದಿರುವ ಕಲಾ ಕೇಂದ್ರವಾಗಿದೆ. ಈ ಅಂಶವನ್ನು ಪರೀಕ್ಷಿಸಿದಾಗ ಹೆಚ್ಚು ದೇವಾಲಯಗಳು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದಂತವುಗಳು. ನಂತರ ಸೇವುಣರ ಕಾಲದ ಕೆಲವೇ ಕೆಲವು ದೇವಾಲಯಗಳು ಅಧ್ಯಯನ ಪ್ರದೇಶದಲ್ಲಿ ಕಂಡುಬರುತ್ತದೆ. ಬಹುತೇಕ ದೇವಾಲಯಗಳು ಏಕಕೂಟ ದೇವಾಲಯಗಳಾಗಿವೆ. ಅವುಗಳೆಂದರೆ, ಅಮ್ಮಿನಭಾವಿಯ ಕಲ್ಮೇಶ್ವರ ದೇವಾಲಯ ಮತ್ತು ಮಲ್ಲಿಕಾರ್ಜುನ ದೇವಾಲಯ, ನರೇಂದ್ರದ ಶಂಕರಲಿಂಗ ದೇವಾಲಯ, ಹೆಬ್ಬಳ್ಳಿಯ ಶಂಭುಲಿಂಗೇಶ್ವರ ದೇವಾಲಯ, ಕನಕೂರಿನ ಕನಕಾಂಬಿಕಾ ದೇವಾಲಯಗಳಾಗಿವೆ. ಇನ್ನು ತ್ರಿಕೂಟಾಚಲ ದೇವಾಲಯ ಎಂದರೆ ಕುರುಡಾಪುರದ ವೀರಭದ್ರ ದೇವಾಲಯಗಳು ಕಲಾ ಶ್ರೀಮಂತಿಕೆಗೆ ಸಾಕ್ಷಿಯಾಗಿವೆ.

ಕೆಲವು ದೇವಾಲಯಗಳು ಬಿದ್ದು ಹೋಗಿದ್ದು, ನಂತರ ಅದನ್ನು ಜೀರ್ಣೋದ್ಧಾರಗೊಳಿಸಿದ್ದಾರೆ. ಇನ್ನೂ ಕೆಲವು ದೇವಾಲಯಗಳು ಸಂಪೂರ್ಣ ನಾಶಗೊಂಡಿವೆ. ಕನಕೂರಿನ ಕಲ್ಮೇಶ್ವರ ದೇವಾಲಯ ನಾಶವಾಗಿದ್ದು, ಅಲ್ಲಿ ಶಿವಲಿಂಗ, ನಂದಿಶಿಲ್ಪ ಹೊಲದಲ್ಲಿ ಬಿದ್ದಿರುವುದನ್ನ ಕಾಣಬಹುದು. ಪ್ರಾಚ್ಯವಸ್ತು ಸಂರಕ್ಷಣಾಲಯದವರು, ಈ ಪ್ರದೇಶದ ಜನರು ಇವುಗಳ ರಕ್ಷಣೆಗೆ ಹೆಚ್ಚಿನ ಆಧ್ಯತೆ ನೀಡುವುದು ಅತಿ ಅವಶ್ಯವಾಗಿದೆ. ಈ ಪ್ರದೇಶದಲ್ಲಿ ದೊರೆಯುವ ಶಿಲ್ಪಗಳು ತಮ್ಮದೇ ಆದಂತಹ ವಿಶೇಷತೆಯಿಂದ ಕೂಡಿದೆ. ಮೂರ್ತಿ ಶಿಲ್ಪವು ಧಾರ್ಮಿಕ ಮತ್ತು ಲೌಕಿಕ ಸ್ಮಾರಕ ಶಿಲ್ಪಗಳನ್ನು ಒಳಗೊಂಡಿದೆ. ಜಿಲ್ಲೆಯಲ್ಲಿ ಅನೇಕ ಧರ್ಮಗಳು ಬೆಳೆದು ಬಂದಿದ್ದರಿಂದ ಆಯಾ ಧರ್ಮಕ್ಕೆ ಸಂಬಂಧಪಟ್ಟ ದೇವಾಲಯ ಮತ್ತು ಮೂರ್ತಿಶಿಲ್ಪಗಳು ನಿರ್ಮಾಣವಾಗಿರುವುದನ್ನು ಗಮನಿಸಬಹುದಾಗಿದೆ.

ಸುಪ್ರಸಿದ್ಧ ಜೈನ ಕೇಂದ್ರಗಳಲ್ಲಿ ಅಮ್ಮಿನಭಾವಿ ಒಂದಾಗಿದೆ. ಜೈನ ಧರ್ಮಕ್ಕೆ ಸಂಬಂಧಿಸಿದಂತೆ ನೇಮಿನಾಥ ಜಿನಾಲಯವು ಅಸ್ತಿತ್ವದಲ್ಲಿದೆ. ನರೇಂದ್ರ ಮತ್ತು ಹೆಬ್ಬಳ್ಳಿ ಜೈನ ಕೇಂದ್ರಗಳಾಗಿದ್ದವು. ಮಾನವ ಸಂಸ್ಕೃತಿಯ ಅವಿಭಾಜ್ಯ ಅಂಗವಾದ ನಂಬಿಕೆ ಆಚರಣೆಯು ಸಾಂಪ್ರಾದಾಯಿಕವಾಗಿ ನಡೆದುಕೊಂಡ ಬಂದ ಒಂದು ಆಚಾರಯುಕ್ತವಾದ ಸಂಪ್ರದಾಯವಾಗಿದೆ. ಈ ಒಂದು ಆಚರಣೆಯು ಗ್ರಾಮೀಣ ಭಾಗದಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ಗ್ರಾಮೀಣ ಜನರು ತಮ್ಮ ಸುಖ-ಸಂತೋಷಕ್ಕೋಸ್ಕರ ಹಲವಾರು ಆಚರಣೆಗಳನ್ನು ಆಚರಿಸುತ್ತಾರೆ. ದೇವರಿಗೆ ಹರಕೆ ಮಾಡಿಕೊಳ್ಳುವುದರಿಂದ ರೋಗ-ರುಜಿನಗಳನ್ನು ದೇವರು ವಾಸಿಮಾಡುತ್ತಾನೆ ಎನ್ನುವ ಬಲವಾದ ನಂಬಿಕೆ ಇಟ್ಟುಕೊಳ್ಳುತ್ತಾರೆ.

ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ಹಲವಾರು ಫಲಕಗಳು ಅಧ್ಯಯನದ ಸಂದರ್ಭದಲ್ಲಿ ಕಂಡು ಬಂದವು. ಮೂಲ ಆಕರಗಳಾದ ಶಾಸನಗಳ ಅವಶೇಷಗಳನ್ನು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸಲಾಯಿತು. ಪ್ರಾಗಿತಿಹಾಸ ಕಾಲದ ಪ್ರಾಚೀನ ನೆಲೆ, ದೇವಾಲಯ, ಮತ್ತು ಮೂರ್ತಿಶಿಲ್ಪಗಳನ್ನು ಅಧ್ಯಯನಕ್ಕೆ ಒಳಪಡಿಸಿ ಅದನ್ನು ಕೂಲಂಕುಷವಾಗಿ ಅಧ್ಯಯನ ಮಾಡಲಾಗಿದೆ. ಈ ಹಿಂದೆ ನಡೆದ ಅಧ್ಯಯನಗಳು ಹೆಚ್ಚಿನ ಸಮಗ್ರತೆಯನ್ನು ಪಡೆದಿರುವುದು ಕಡಿಮೆ ಎಂದೇ ಹೇಳಬಹುದು. ಈ ಹಿನ್ನಲೆಯಲ್ಲಿ ಇಂತಹ ಕೊರತೆಯನ್ನು ಸಾಧ್ಯವಾದ ಮಟ್ಟಿಗೆ ನೀಗಿಸಿಕೊಳ್ಳುವ ಪ್ರಯತ್ನವನ್ನು ಕೈಗೊಳ್ಳಲಾಗಿದೆ. ಒಟ್ಟಾರೆ ಈ ಅಧ್ಯಯನವು ಅಮ್ಮಿನಭಾವಿ ಪರಿಸರವು ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯ ವೈವಿಧ್ಯಮಯ ಸ್ಥೂಲ ವಿಷಯವನ್ನು ಒಂದೆಡೆ ತಿಳಿಸಲು ತುಂಬಾ ಸಹಾಯಕವಾಗಿದೆ.

# ಅನುಬಂಧಗಳು

**ಸಂಕ್ಷೇಪಗಳು :**

| | | |
|---|---|---|
| ೦೧. ಎ.ಆರ್.ಐ.ಇ. | – | ಎನ್ಯುವಲ್ ರಿಪೋರ್ಟ್ ಆಫ್ ಇಂಡಿಯನ್ ಎಪಿಗ್ರಫಿ. |
| ೦೨. ಇ.ಐ. | – | ಎಪಿಗ್ರಾಫಿಯಾ ಇಂಡಿಕಾ |
| ೦೩. ಐ.ಎ. | – | ಇಂಡಿಯನ್ ಅಂಟಿಕ್ವರಿ |
| ೦೪. ಐ.ಎ.ಆರ್. | – | ಇಂಡಿಯನ್ ಆರ್ಕಿಯಾಲಜಿಲ್ರಿ ರಿವೀವ್ |
| ೦೫. ಕ.ಐ. | – | ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್ |
| ೦೬. ಕ.ಭಾ.ಧಾ. | – | ಕರ್ನಾಟಕ ಭಾರತಿ ಧಾರವಾಡ |
| ೦೭. ಕ.ದೇ.ಕೋ.ಧಾ. | – | ಕರ್ನಾಟಕ ದೇವಾಲಯ ಕೋಶ ಧಾರವಾಡ ಜಿಲ್ಲೆ |
| ೦೮. ಕ.ವಿ.ವಿ. | – | ಕನ್ನಡ ವಿಷಯ ವಿಶ್ವಕೋಶ |
| ೦೯. ಜೆ.ಕೆ.ಯು | – | ಜರ್ನಲ್ ಆಫ್ ಕರ್ನಾಟಕ ಯುನಿವರ್ಸಿಟಿ |
| ೧೦. ಧಾ.ಜಿ.ಶಾ.ಸೂ. | – | ಧಾರವಾಡ ಜಿಲ್ಲಾ ಶಾಸನಸೂಚಿ |
| ೧೧. ಧಾ.ತಾ.ಶಾ. | – | ಧಾರವಾಡ ತಾಲೂಕಿನ ಶಾಸನಗಳು |
| ೧೨. ಸೌ.ಇ.ಇ. | – | ಸೌಥ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ |

# ಗ್ರಂಥಋಣ

**ಕನ್ನಡ ಕೃತಿಗಳು :**


೦೧. ಅಣ್ಣಿಗೇರಿ ಎ.ಎಂ., ೧೯೬೧, **ಕರ್ನಾಟಕದ ಸಾಂಸ್ಕೃತಿಕ ಸ್ಥಳಗಳು**, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೦೨. ಅಣ್ಣಿಗೇರಿ ಎ.ಎಂ., (ಸಂ), ೧೯೬೧, **ಶಾಸನ ಸಾಹಿತ್ಯ ಸಂಚಯ**, ಧಾರವಾಡ.

೦೩. ಅಣ್ಣಿಗೇರಿ ಎ.ಎಂ., ೧೯೮೭, **ಭಾರತದ ಪ್ರಾಚೀನ ನಾಣ್ಯಗಳು**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೦೪. ಅಪರ್ಣಾ ಕೂ.ಸ., (ಸಂ), ೧೯೯೯, **ದೇವಾಲಯ ವಾಸ್ತುಶಿಲ್ಪ ಪರಿಚಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೫. ಎಚ್ಚೆಸ್ಕೆ (ಸಂ), ೧೯೮೫, **ಅವಲೋಕನ**, ವಿಶ್ವಕನ್ನಡ ಸಮ್ಮೇಳನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೦೬. ಕೃಷ್ಣ ಎಂ.ಎಚ್., ೧೯೫೨, **ಕರ್ನಾಟಕದ ಪೂರ್ವಚರಿತ್ರೆ**, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೦೭. ಕಲಬುರ್ಗಿ ಎಂ.ಎಂ., ೧೯೭೦, **ಶಾಸನಗಳಲ್ಲಿ ಶಿವಶರಣರು**, ಸಿರಿಗನ್ನಡ ಪ್ರಕಾಶನ, ಧಾರವಾಡ.

೦೮. ಕಲಬುರ್ಗಿ ಎಂ.ಎಂ., (ಸಂ), ೧೯೭೫, **ಧಾರವಾಡ ಜಿಲ್ಲಾ ಶಾಸನಸೂಚಿ**, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೦೯. ಕಲಬುರ್ಗಿ ಎಂ.ಎಂ., ೧೯೭೬, **ಧಾರವಾಡ ತಾಲೂಕಿನ ಶಾಸನಗಳು**, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೦. ಕಲಬುರ್ಗಿ ಎಂ.ಎಂ., ೧೯೮೦, **ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೧. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ, ೧೯೭೦, **ಕರ್ನಾಟಕ ಇತಿಹಾಸ ದರ್ಶನ**, ಕರ್ನಾಟಕ ಸರ್ಕಾರ, ಪ್ರಕಾಶನ ಮಂದಿರ, ಬೆಂಗಳೂರು.

೧೨. ಕೃಷ್ಣರಾವ್ ಕಪಟರಾಳ್, ೧೯೭೦, **ಕರ್ನಾಟಕ ಸಂಸ್ಕೃತಿ ಸಂಶೋಧನೆ**, ಉಷಾ ಸಾಹಿತ್ಯ ಮಾಲೆ, ಮೈಸೂರು.

೧೩. ಕೃಷ್ಣಶರ್ಮ ಬೆಟಗೇರಿ, ೧೯೬೩, **ಕರ್ನಾಟಕ ಜನಜೀವನ**, ಜಯಂತಿ ಕಾರ್ಯಾಲಯ, ಧಾರವಾಡ.

೧೪. ಕಲಬುರ್ಗಿ ಎಂ.ಎಂ., ೧೯೮೬, **ಕನ್ನಡ ಶಾಸನ ಸಂಪದ**, ಕನ್ನಡ ಸಂಶೋಧನೆ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೫. ಗೋಪಾಲರಾವ್ ಎಚ್.ಎಸ್., **ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು, ನಿರ್ದೇಶನಾಲಯಗಳು, ಮೈಸೂರು.

೧೬. ಗೋಪಾಲರಾವ್ ಆರ್., ೨೦೦೮, **ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ**, ಪ್ರಾಚೀನ ವಸ್ತುಸಂಗ್ರಹಾಲಯ ಇಲಾಖೆ, ಮೈಸೂರು.

೧೭. ಗೋಪಾಲ ಬಾ.ರಾ., ೧೯೯೬, **ಇತಿಹಾಸಶಾಸ್ತ್ರ ಮತ್ತು ಸಿದ್ಧಾಂತ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೮. ಗೋಪಾಲ ಬಾ.ರಾ., ೧೯೮೭, **ಕರ್ನಾಟಕದಲ್ಲಿ ನವಶಿಲಾಯುಗ ಉಪನ್ಯಾಸ ಗ್ರಂಥಮಾಲೆ–೧೨೩**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೯. ಗೋಪಾಲ ಬಾ.ರಾ., ೧೯೮೩, **ಬನವಾಸಿಯ ಕದಂಬರು**, ಶಿರಸಿ.

೨೦. ಚಂದ್ರಶೇಖರಯ್ಯ ಬಿ.ಎಂ., ೨೦೦೫, **ಕರ್ನಾಟಕ ಸಾಂಸ್ಕೃತಿಕ ಇತಿಹಾಸ ಪರಂಪರೆ**, ಸಿವಿಜಿ ಪಬ್ಲಿಕೇಶನ್ಸ್, ಬೆಂಗಳೂರು.

೨೧. ಚಂದ್ರಶೇಖರ ನಾರಾಯಣಪುರ, ೨೦೦೨, **ವೀರಶೈವ ಮಠಗಳು**, ಗೆಳೆಯ ಪ್ರಕಾಶನ, ಚಿಕ್ಕಮಗಳೂರು.

೨೨. ಚನ್ನಕ್ಕ ಪಾವಟೆ, ೧೯೭೧, **ಮಾಸ್ತಿಕಲ್ಲು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೩. ಚನ್ನಕ್ಕ ಪಾವಟೆ, ೨೦೦೩, **ಶಾಸನ ಸಂಜೀವಿನಿ**, ಚನ್ನಗಂಗಾ ಪ್ರಕಾಶನ, ಧಾರವಾಡ.

೨೪. ಚನ್ನಕ್ಕ ಪಾವಟೆ, ೧೯೯೫, **ಸಂಸ್ಕೃತಿ ಸಂಶೋಧನೆ**, ಚನ್ನಗಂಗಾ ಪ್ರಕಾಶನ, ಧಾರವಾಡ.

೨೫. ಚನ್ನಕ್ಕ ಪಾವಟೆ, ೧೯೯೮, **ಹಾನಗಲ್ ಕದಂಬರು**, ಚನ್ನಗಂಗಾ ಪ್ರಕಾಶನ, ಧಾರವಾಡ.

೨೬. ಚಿದಾನಂದಮೂರ್ತಿ ಎಂ., ೧೯೭೯, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ. ೫೫೦ ರಿಂದ ೧೧೫೦ರವರೆಗೆ)**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೭. ಚಿದಾನಂದಮೂರ್ತಿ ಎಂ., ೧೯೭೭, **ವೀರಗಲ್ಲುಗಳು ಹಾಗೂ ಮಾಸ್ತಿಗಲ್ಲುಗಳು**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೮. ಚಿದಾನಂದಮೂರ್ತಿ, ಎಂ., ೨೦೦೩, **ಕರ್ನಾಟಕ ನೇಪಾಳ ಸಾಂಸ್ಕೃತಿಕ ಸಂಬಂಧ**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ಜೋಶಿ ಪಿ.ಬಿ., ೧೯೮೮, **ಪ್ರಾಚೀನ ಭಾರತದ ಇತಿಹಾಸ**, ವಿದ್ಯಾನಿಧಿ ಪ್ರಕಾಶನ, ಗದಗ.

೩೦. ತಿಪ್ಪೇಸ್ವಾಮಿ ಹೆಚ್., ೧೯೯೭, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**, ಡಿ.ವಿ.ಕೆ. ಮೂರ್ತಿ (ಪ್ರಕಾಶಕರು), ಮೈಸೂರು.

೩೧. ದೇಸಾಯಿ ಪಿ.ಬಿ., ೧೯೬೧, **ಕನ್ನಡ ನಾಡಿನ ಶಾಸನಗಳು**, ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೨. ನಾಗಯ್ಯ, ಜಿ.ಎಂ., ೧೯೯೨, **ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ**, ವೀರಶೈವ ಅಕಾಡೆಮಿ, ಶ್ರೀನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

೩೩. ನರಸಿಂಹಮೂರ್ತಿ ಎ.ವಿ., ೧೯೭೫, **ಕರ್ನಾಟಕದಲ್ಲಿ ಪುರಾತತ್ವ ಶೋಧನೆ**, ಬೆಂಗಳೂರು.

೩೪. ಪರಮಶಿವಮೂರ್ತಿ ಡಿ.ವಿ., ೧೯೯೯, **ಕನ್ನಡ ಶಾಸನ ಶಿಲ್ಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫. ಪಾಟೀಲ್ ಎಸ್.ಬಿ., ೧೯೮೨, **ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ**, ಬಸವಶ್ರೀ ಪ್ರಕಾಶನ ಸಂಕೇಶ್ವರ.

೩೬. ಮಹದೇವ ಸಿ., ೨೦೦೧, **ಕರ್ನಾಟಕ ಪುರಾತತ್ವ ಶೋಧ**, ಶ್ರೀಲಕ್ಷ್ಮೀ ಪ್ರಕಾಶನ, ಶ್ರೀರಂಗಪಟ್ಟಣ.

೩೭. ಮಹದೇವ ಸಿ., (ಸಂ), ೨೦೦೬, **ಕರ್ನಾಟಕ ದೇವಾಲಯ ಕೋಶ**, ಧಾರವಾಡ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೮. ಮಂಜುನಾಥ ಬೇವಿನಕಟ್ಟಿ, ೨೦೦೭, **ಕನ್ನಡ ಜನಪದ ನಂಬಿಕೆಗಳು**, ಜ್ಯೋತಿ ಪ್ರಕಾಶನ, ಮೈಸೂರು.

೩೯. ರಾಜಶೇಖರ ಎಸ್., ೧೯೮೮, **ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ**, ಸುಜಾತ ಪಬ್ಲಿಕೇಷನ್ಸ್, ಧಾರವಾಡ.

೪೦. ರಮೇಶ ನಾಯ್ಕ, (ಸಂ), ೨೦೦೭, **ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಮರುಚಿಂತನೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೧. ರಾಮಚಂದ್ರರಾವ್, ಎಸ್.ಕೆ., ೧೯೭೮, **ಕರ್ನಾಟಕದ ಕಲೆಗಳು ವಾಸ್ತು,** ಸಂಪುಟ-೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೨. ರಾಮಚಂದ್ರರಾವ್ ಎಸ್.ಕೆ., ೧೯೭೫, **ಮೂರ್ತಿಶಿಲ್ಪದ ನೆಲೆ ಹಿನ್ನಲೆ,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೪೩. ಲಕ್ಷ್ಮಣ ತೆಲಗಾವಿ (ಸಂ.), ೨೦೦೫, **ಸ್ಥಳೀಯ ಚರಿತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೪. ಲಕ್ಷ್ಮಣ ತೆಲಗಾವಿ, ೨೦೦೪, **ಮೌರ್ಯ ಮತ್ತು ಶಾತವಾಹನಯುಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೫. ವೆಂಕಟರಂಗೋಕಟ್ಟಿ, ೧೯೮೪, **ಮುಂಬೈ ಗ್ಯಾಜೆಟಿಯರ್, ಕರ್ನಾಟಕ ಭಾಗ,** ಏಷಿಯನ್ ಎಜ್ಯುಕೇಶನ್ ಸರ್ವಿಸಸ್, ದೆಹಲಿ.

೪೬. ಶೇಷಶಾಸ್ತ್ರಿ ಆರ್., ೧೯೮೨, **ಕರ್ನಾಟಕದ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೭. ಶಿವಕುಮಾರಸ್ವಾಮಿ ಸಿ.ಎಸ್., ೧೯೮೮, **ಕರ್ನಾಟಕದ ಜಾತ್ರೆಗಳು,** ಬಿ.ಆರ್. ಪ್ರೊಜೆಕ್ಟ್, ಮೈಸೂರು ವಿಶ್ವವಿದ್ಯಾನಿಲಯ.

೪೮. ಷೇಕಅಲಿ, ಬಿ., (ಪ್ರ.ಸಂ.), ಮತ್ತು ಸುಂದರ ಅ. (ಸಂ.)೧೯೯೭, ಕರ್ನಾಟಕದ ಚರಿತ್ರೆ, ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ.

೪೯. ಷೇಕಅಲಿ, ಬಿ., (ಪ್ರ.ಸಂ.), ಮತ್ತು ಸುಂದರ ಅ. (ಸಂ.)೧೯೯೭, ಕರ್ನಾಟಕದ ಚರಿತ್ರೆ, ಸಂಪುಟ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ.

೫೦. ಷಡಕ್ಷರಯ್ಯ ರು.ಮ., ಜಯಮ್ಮ ಬಿ., ೨೦೦೭, **ಧಾರವಾಡ ಜಿಲ್ಲೆಯ ಐತಿಹಾಸಿಕ ಸ್ಮಾರಕಗಳು ಮತ್ತು ಶಿಲ್ಪಗಳು,** ಧಾರವಾಡ ಉತ್ಸವ ಸಮಿತಿ, ಧಾರವಾಡ ಜಿಲ್ಲಾ ಆಡಳಿತ, ಧಾರವಾಡ.

೫೧. ಸುರೇಂದ್ರರಾವ್ ಬಿ., ೧೯೯೭, **ಕರ್ನಾಟಕ ಚರಿತ್ರೆ, ಸಂಪುಟ-೨,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೨. ಸುಂದರ ಅ. (ಸಂ.), ೧೯೯೭, **ಕರ್ನಾಟಕ ಚರಿತ್ರೆ, ಸಂಪುಟ-೧,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೩. ಸಿಂದಗಿ ರಾಜಶೇಖರ ೧೯೮೮, **ಕರ್ನಾಟಕದ ವಾಸ್ತು ಶಿಲ್ಪ ಮತ್ತು ಚಿತ್ರಕಲೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ.

೫೪. ಸೂರ್ಯನಾಥ, ಕಾಮತ್, (ಪ್ರಸಂ.), ೧೯೮೪, **ಕರ್ನಾಟಕ ರಾಜ್ಯ ಗ್ಯಾಜೆಟಿಯರ್ (೩ ಸಂಪುಟಗಳು)** ಕರ್ನಾಟಕ ಸರ್ಕಾರ, ಬೆಂಗಳೂರು.

೫೫. ಸೂರ್ಯನಾಥ ಕಾಮತ್, ೧೯೭೩, **ಕರ್ನಾಟಕ ಸಂಕ್ಷಿಪ್ತ ಇತಿಹಾಸ,** ಬೆಂಗಳೂರು.

೫೬. ಸೂರ್ಯನಾಥ ಕಾಮತ್, ((ಪ್ರಸಂ.), ೧೯೯೫, **ಧಾರವಾಡ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ,** ಬೆಂಗಳೂರು.

೫೭. ಹಿರೇಮಠ ಬಿ.ಆರ್., ೧೯೭೮, **ವೀರಗಲ್ಲುಗಳು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೮. ಹಿರೇಮಠ, ಬಿ.ಆರ್., ೧೯೮೬, **ಶಾಸನಗಳಲ್ಲಿ ಕರ್ನಾಟಕದ ವರ್ತಕರು,** ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೯. ಹಿರೇಮಠ, ಎಸ್.ಎಸ್., ೧೯೯೩, **ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಜಾತ್ರೆಗಳು,** ಸಮತಾ ಪ್ರಕಾಶನ ಬಿ.ವೆಂಕೋಬಿ ಮಡಿಯಪ್ಪನ ಗುಡಿ ಹತ್ತಿರ ಹೊಸಪೇಟೆ.

೬೦. ಹಂಜೆ ಅಪ್ಪಣ್ಣ, ಎನ್., ೨೦೦೮, **ಧಾರವಾಡ ಪರಿಸರದಲ್ಲಿ ಜೈನಧರ್ಮ,** ಭಾರತೀಯ ಜೈನ ಮಿಲನ್, ಬಾಣಸವಾಡಿ, ಬೆಂಗಳೂರು.

೬೧. ಜ್ಞಾನಾನಂದ ಜಿ., ೨೦೦೧, **ಶಿಲ್ಪಾದರ್ಶ, ಸಂಪುಟ-೧,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ.

೬೨. ಜ್ಞಾನಾನಂದ, ಜಿ., ೨೦೦೨, ಶಿಲ್ಪಾದರ್ಶ, ಸಂಪುಟ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಇಂಗ್ಲೀಷ್ ಕೃತಿಗಳು :**

01. Desai P.B., (ED) 1970, **History of Karnataka**, Kannada Research Institute, Karnatak University, Dharwad.

02. Joshi R.V., 1955, **Pleistocene Studies in the Malaprabha Basin Karnataka**, Puna University.

03. Joshi R.R., 1993, **A Cultural History of Dharwad Region**, Karnataka University, Dharwad.

04. Prasannakumar Acharya, 1994, **Encyclopedia of Hindu Architecture**, vol.1-2, Kasmo Publication, New Delhi.

05. Parguson Jems, 1996, **Architecture in Dharwad and Mysore**.

06. Rajashekhar N., 1991, **Rastrakuta Art in Karnataka**, Sujata Publication, Dharwad.

07. Srinivasan K.R., 1972, **Temples of South India**, National Book Trust of India, New Delhi.

08. Sharma S.R., 1940, **Jainism and Karnataka Culture**, Karnataka Historical Research Society, Dharwad.

**ಶಾಸನ ಸಂಪುಟಗಳು (Epigraphy Volumes):**

1. Annual Reports on South India Epigraphy, 1940-41.
2. Annual Reports on South India Epigraphy, 1952-53.
3. Epigraphia Carnatic, vol-XVII,XIX & XXI.
4. Gopal B.R., 1985, Corpus of Kadamba Inscriptions.
5. Karnataka Inscriptions.
6. South Indian Inscriptions.

**ನಿಯತಕಾಲಿಕೆಗಳು :**

೦೧. ಕನ್ನಡ ಸಾಹಿತ್ಯ ಪರಿಷತ್ವ-ಪತ್ರಿಕೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೦೨. ಕರ್ನಾಟಕ ಭಾರತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೦೩. ಪ್ರಬುದ್ಧ ಕರ್ನಾಟಕ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೦೪. ಶಾಸನ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೫. ಎ ಗೇಟ್ ಟು ದ ಕನ್ನಡ ರಿಸರ್ಚ್ ಇನ್ಸಸ್ಟಿಟ್ಯೂಟ್ ಮ್ಯೂಸಿಯಂ.

೦೬. ಜರ್ನಲ್ ಆಫ್ ದಿ ಕರ್ನಾಟಕ ಯುನಿವರ್ಸಿಟಿ(ಸೋಶಿಯಲ್ ಸಾಯನ್ಸ್), ಧಾರವಾಡ.

೦೭. ಇಂಡಿಯನ್ ಆರ್ಕಿಯಾಲಜಿ, ೧೯೬೭-೬೮, ರಿವೀವ್.

೦೮. ಪ್ರಜಾವಾಣಿ ದಿನಪತ್ರಿಕೆ.




ಧಾರವಾಡ ಜಿಲ್ಲೆ

ಛಾಯಾಚಿತ್ರ :



ನವಶಿಲಾಯುಗ ಸಂಸ್ಕೃತಿಯ ಮಾನವನ ವಾಸಸ್ಥಳ, ಚಂದನಮಟ್ಟಿ



ನವಶಿಲಾಯುಗ ಸಂಸ್ಕೃತಿಯ ನೆಲೆ, ಚಂದನಮಟ್ಟಿ



ನವಶಿಲಾಯುಗ ಸಂಸ್ಕೃತಿಯ ಶಿಲಾಕೊಡಲಿಗಳು, ಚಂದನಮಟ್ಟಿ



ಬಾವಿ, ಅಮ್ಮಿನಭಾವಿ



ಮಲ್ಲಿಕಾರ್ಜುನ ದೇವಾಲಯ: ನವರಂಗ, ಅಮ್ಮಿನಭಾವಿ



ಕಲ್ಮೇಶ್ವರ ದೇವಾಲಯ, ಅಮ್ಮಿನಭಾವಿ



ಪಂಚಗೃಹ ಹಿರೇಮಠ, ಅಮ್ಮಿನಭಾವಿ



ಮಾನಸ್ಥಂಭ, ಅಮ್ಮಿನಭಾವಿ



ನೇಮಿನಾಥ ಶಿಲ್ಪ, ಜಿನಾಲಯ, ಅಮ್ಮಿನಭಾವಿ



ಕಾರ್ತಿಕೆಯ ಶಿಲ್ಪ, ಮರೇವಾಡ



ದಕ್ಷ ಮತ್ತು ಪತ್ನಿ, ಕರಡಿಗುಡ್ಡ



ವೀರಗಲ್ಲು, ಅಮ್ಮಿನಭಾವಿ



ಉತ್ತರ ಗೋಡೆಯ ಶಾಸನ, ಅಮ್ಮಿನಭಾವಿ



ಹೊಲದಲ್ಲಿದ್ದ ಶಾಸನ, ನರೇಂದ್ರ







ಪಂಚಗೃಹ ಹಿರೇಮಠದ ಭಿತ್ತಿಚಿತ್ರಗಳು, ಅಮ್ಮಿನಭಾವಿ

